# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1461
ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅರಣ್ಯ ವಾಸಿಗಳ ಅಧಿನಿಯಮಗಳ ಪ್ರಕಾರ ಜಮೀನುಗಳ ಮಂಜೂರಾತಿಗೆ ಎಷ್ಟು ಅರ್ಜಿಗಳು ಸಲ್ಲಿಕೆಯಾಗಿವೆ (ವಿವರ ನೀಡುವುದು); | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅರಣ್ಯ ಹಕ್ಕು ಕಾಯ್ದೆಯಡಿಯಲ್ಲಿ ಮಂಜೂರಾತಿ ನೀಡಿರುವ ಅರ್ಜಿಗಳ ವಿವರ ಈ ಕೆಳಕಂಡಂತಿದೆ. |
| ಆ) | ಈ ಪೈಕಿ ಎಷ್ಟು ಜನರಿಗೆ ಎಷ್ಟು ಜಮೀನು ಮಂಜೂರಾಗಿವೆ (ಸಂಪೂರ್ಣ ವಿವರ ನೀಡುವುದು)? | |

| ಕ್ಲೇಮುದಾರರ ವಿವರ | ಸ್ವೀಕೃತಗೊಂಡ ಅರ್ಜಿಗಳ ಸಂಖ್ಯೆ | ವಿತರಿಸಿರುವ ಹಕ್ಕು ಪತ್ರಗಳ ಸಂಖ್ಯೆ | ಮಂಜೂರು ಮಾಡಿರುವ ಭೂಮಿ ವಿವರ (ಎಕರೆಗಳಲ್ಲಿ) |
|---|---|---|---|
| ಪರಿಶಿಷ್ಟ ಪಂಗಡ | 806 | 146 | 175.32 |
| ಇತರೆ ಪಾರಂಪರಿಕ ಅರಣ್ಯ ವಾಸಿಗಳು | 1623 | 0 | 0 |
| ಸಮುದಾಯ ಹಕ್ಕುಗಳು | 37 | 4 | 2.74 |
| ಒಟ್ಟು | 2466 | 150 | 178.06 |

ಸಕಇ 107 ಎಸ್‌ಟಿಪಿ 2021

(ಬಿ.ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1545 |
| 2 | ಸದಸ್ಯರ ಹೆಸರು | ಡಾ|| ಅಂಜಲಿ ಹೇಮಂತ್ ನಿಂಬಾಳ್ಕರ್, (ಖಾನಾಪುರ) |
| 3 | ಉತ್ತರಿಸಬೇಕಾದ ದಿನಾಂಕ | 22.03.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಖಾನಾಪುರ ಪಟ್ಟಣಕ್ಕೆ ಸಂಬಂಧಿಸಿದಂತೆ ಖಾನಾಪುರ ನಗರ ಭೂಮಾಪನಾ ಕಛೇರಿ ಇಲ್ಲದಿರುವುದರಿಂದ ಪಟ್ಟಣದ ಆಸ್ತಿ ದಾಖಲೆಗಳ ನಿರ್ವಹಣೆಗೆ ತೊಡಕಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ<br>ಖಾನಾಪುರ ಪಟ್ಟಣದಲ್ಲಿ ಈಗಾಗಲೆ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ ಕಾರ್ಯ ನಿರ್ವಹಿಸುತ್ತಿದೆ. ಖಾನಾಪುರ ಪಟ್ಟಣದಲ್ಲಿ ನಗರ ಭೂಮಾಪನ ಅಳವಡಿಸದೆ ಇರುವುದರಿಂದ ಪಟ್ಟಣದ ಆಸ್ತಿ ದಾಖಲೆಗಳ ನಿರ್ವಹಣೆ ಮಾಡ ಲಾಗುತ್ತಿಲ್ಲ.<br>ಮರು ಭೂಮಾಪನ ಮಾಡುವ ಸಮಯದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ಎಲ್ಲಾ ಆಸ್ತಿ/ಸ್ವತ್ತುಗಳನ್ನು ಅಳತೆ ಮಾಡಿದ ನಂತರ ದಾಖಲೆ ನಿರ್ವಹಣೆ ಮಾಡಲಾಗುವುದು.<br>ರಾಜ್ಯದಲ್ಲಿ ಸರ್ವೆ ಆಫ್ ಇಂಡಿಯಾದ ಸಂಸ್ಥೆಯ ಸಹಯೋಗದೊಂದಿಗೆ ಡ್ರೋನ್ ಬಳಸಿ ಮರು ಭೂಮಾಪನ ಮಾಡಲು ತೀರ್ಮಾನಿಸಲಾಗಿದ್ದು. ಮೊದಲ ಹಂತ ಸರ್ಕಾರದ ಆದೇಶ ಸಂ.ಆರ್.ಡಿ. 158 ಭೂದಾಸೇ 2018, ದಿನಾಂಕ:7-11-2018 ಮತ್ತು 28-12-2018 ರಲ್ಲಿ ತುಮಕೂರು, ರಾಮನಗರ, ಹಾಸನ, **ಬೆಳಗಾವಿ** ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮರು ಭೂಮಾಪನ ಮಾಡಲು ಅನುಮತಿ ನೀಡಲಾಗಿದ್ದು, ಅಳತೆ ಕಾರ್ಯ ಪ್ರಗತಿಯಲ್ಲಿದೆ. ಅದೇ ರೀತಿಯಾಗಿ ಉಳಿದ ಜಿಲ್ಲೆಗಳಿಗೂ ಸಹ ಹಂತ ಹಂತವಾಗಿ ಡ್ರೋನ್ ಬಳಸಿ ಮರು ಭೂಮಾಪನ ಕಾರ್ಯ ಕೈಗೊಳ್ಳಲಾಗುವುದು.<br>ಅದರಂತೆ ಮರು ಭೂಮಾಪನ ಮಾಡುವ ಸಮಯದಲ್ಲಿ ಖಾನಾಪುರ ಪಟ್ಟಣಕ್ಕೆ ಸಂಬಂಧಿಸಿದ ಆಸ್ತಿಗಳನ್ನು ಅಳತೆ ಮಾಡಿ ದಾಖಲೆ ನಿರ್ವಹಣೆಯ ಮಾಡುವ ಕುರಿತು ಕ್ರಮ ಕೈಗೊಳ್ಳಲಾಗುವುದು. |
| ಆ) | ನಗರ ಸ್ಥಳೀಯ ಸಂಸ್ಥೆಗಳಲ್ಲಿ ನಗರ ಭೂಮಾಪನ ಕಛೇರಿ ಸ್ಥಾಪಿಸಲು ಇರುವ ಮಾರ್ಗ ಸೂಚಿಗಳೇನು; | ಭೂಮಾಪನ ಇಲಾಖೆಯು ಸ್ವತಂತ್ರ ಇಲಾಖೆಯಾಗಿದ್ದು ಸ್ಥಳೀಯ ಸಂಸ್ಥೆಗಳಲ್ಲಿ ನಗರ ಭೂಮಾಪನ ಕಛೇರಿ ಸ್ಥಾಪಿಸಲು ಅವಕಾಶವಿರುವುದಿಲ್ಲ. |
| ಇ) | ಖಾನಾಪುರ ಪಟ್ಟಣದಲ್ಲಿ ಭೂಮಾಪನ ಕಛೇರಿ ತೆರೆಯಲು ಸರ್ಕಾರವು ಯಾವ ಕ್ರಮ ಕೈಗೊಂಡಿದೆ? | ಖಾನಾಪುರ ತಾಲ್ಲೂಕು ವ್ಯಾಪ್ತಿಗೆ ಸಂಬಂಧಿಸಿದಂತೆ ಖಾನಾಪುರ ಪಟ್ಟಣದಲ್ಲಿ ಈಗಾಗಲೇ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ ಕಾರ್ಯ ನಿರ್ವಹಿಸುತ್ತಿದೆ. |

**ಸಂಖ್ಯೆ: ಕಂಇ 64 ಎಸ್ಎಸ್‌ಸಿ 2021**

**(ಆರ್.ಅಶೋಕ)**

ಕಂದಾಯ ಸಚಿವರು

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1548 |
| ಸದಸ್ಯರ ಹೆಸರು | : | ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ) |
| ಉತ್ತರಿಸುವ ದಿನಾಂಕ | : | 22-03-2021. |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ಬೆಳಗಾವಿ ಪಣಜಿ ರಾಷ್ಟ್ರೀಯ ಹೆದ್ದಾರಿ ರಸ್ತೆ ಅಗಲೀಕರಣದಿಂದ ರಸ್ತೆ ಬದಿ ಮರಗಳ ನಾಶ ಮತ್ತು ರೈತರ ಜಮೀನು ನಷ್ಟವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬೆಳಗಾವಿ ಪಣಜಿ ರಾಷ್ಟ್ರೀಯ ಹೆದ್ದಾರಿ ಅಗಲೀಕರಣ ರಸ್ತೆ ನಿರ್ಮಾಣಕ್ಕೆ ಅಡ್ಡಿಯಾಗುತ್ತಿದ್ದ ಮರಗಳನ್ನು ಮಾತ್ರ ಸಂಬಂಧಪಟ್ಟ ಅರಣ್ಯ ಇಲಾಖೆಯ (ಬೆಳಗಾಂ ಮತ್ತು ಹಳಿಯಾಳ) ಅನುಮತಿ ಪಡೆದು ತೆರವುಗೊಳಿಸಲಾಗಿದೆ. ಭೂಸ್ವಾಧೀನಪಡಿಸಿಕೊಂಡಿರುವ ಭೂಮಿಗೆ ರಾಷ್ಟ್ರೀಯ ಹೆದ್ದಾರಿ ಕಾಯ್ದೆ 1956 ಮತ್ತು ಆರ್‌ಎಫ್‌ಸಿಟಿಎಲ್‌ಎಆರ್‌ಆರ್ ಕಾಯ್ದೆ 2013 ರ ಪ್ರಕಾರ ಪರಿಹಾರ ನೀಡಲಾಗಿರುವುದಾಗಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿಸಿರುತ್ತಾರೆ. |
| ಆ) | ಮರಗಳ ನಾಶದಿಂದಾಗಿ ಪ್ರಕೃತಿ ಅಸಮತೋಲನ ನಿವಾರಣೆಗೆ ಸರ್ಕಾರವು ಕೈಗೊಂಡ ಕ್ರಮಗಳೇನು: | ಭೂಸ್ವಾಧೀನಪಡಿಸಿಕೊಂಡ ಅರಣ್ಯ ಮತ್ತು ಭೂಮಿಗೆ ಅರಣ್ಯೀಕರಣ ಮತ್ತು ಪರಿಹಾರ ಒದಗಿಸುವ ಸಂಬಂಧ, ಸಂಬಂಧಪಟ್ಟ ವಿಭಾಗಗಳ ಬೇಡಿಕೆಯ ಸೂಚನೆಗಳಂತೆ ಈಗಾಗಲೇ ಅರಣ್ಯ ಇಲಾಖೆಗೆ ಅಗತ್ಯ ಪಾವತಿಗಳನ್ನು ಮಾಡಲಾಗಿರುವುದಾಗಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿಸಿರುತ್ತಾರೆ. |
| ಇ) | ಸದರಿ ರಸ್ತೆ ಅಗಲೀಕರಣದಿಂದ ಜಮೀನು ಕಳೆದುಕೊಂಡ ರೈತರಿಗೆ ನೀಡುತ್ತಿರುವ ಪರಿಹಾರ ಮೊತ್ತವನ್ನು ಹೆಚ್ಚಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು? | ಕೇಂದ್ರ ಸರ್ಕಾರವು ಈ ಯೋಜನೆ ಭೂಸ್ವಾಧೀನಕ್ಕೆ ಅಸಿಸ್ಟೆಂಟ್ ಕಮೀಷನರ್, ಬೆಳಗಾವಿ ರವರನ್ನು ಸಕ್ಷಮ ಪ್ರಾಧಿಕಾರವಾಗಿ ನೇಮಕ ಮಾಡಲಾಗಿದ್ದು, ಮೇಲೆ ತಿಳಿಸಿದ ಕಾಯ್ದೆಗಳ ಪ್ರಕಾರ ಪರಿಹಾರವನ್ನು ಪಾವತಿಸಲಾಗುತ್ತಿದೆ. ಸಕ್ಷಮ ಪ್ರಾಧಿಕಾರ ನಿಗದಿಪಡಿಸಿದ ಪರಿಹಾರದ ಮೊತ್ತಕ್ಕೆ ಯಾವುದೇ ಅತೃಪ್ತಿ ಇದ್ದರೆ, ಅನ್ಯಾಯಕ್ಕೊಳಗಾದವರು ಕೇಂದ್ರ ಸರ್ಕಾರದಿಂದ ನೇಮಿಸಲ್ಪಟ್ಟ ಮಧ್ಯಸ್ಥಿಕೆಗಾರರನ್ನು (Arbitrator) ಸಂಪರ್ಕಿಸಬಹುದು. ಪ್ರಾದೇಶಿಕ ಆಯುಕ್ತರ ಕಛೇರಿಯಲ್ಲಿ ಹೆಚ್ಚುವರಿ ಆಯುಕ್ತರು ವಿಷಯದ ಮಧ್ಯಸ್ಥಿಕೆಗಾರರಾಗಿರುತ್ತಾರೆಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿಸಿರುತ್ತಾರೆ. |

ಕಡತ ಸಂಖ್ಯೆ: ಲೋಇ 103 ಸಿಎನ್‌ಹೆಚ್ 2021 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1552 |
| ಸದಸ್ಯರ ಹೆಸರು | : | ಶ್ರೀ ದೇವೇಗೌಡ ಜಿ.ಟಿ. (ಚಾಮುಂಡೇಶ್ವರಿ) |
| ಉತ್ತರಿಸುವ ದಿನಾಂಕ | : | 22.03.2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿಗಳು<br>ಲೋಕೋಪಯೋಗಿ ಇಲಾಖೆ |

| ಕ್ರಮ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ತಾಲ್ಲೂಕಿನ ಸರ್ಕ್ಯೂಟ್ ಹೌಸ್ ರಸ್ತೆಯ ಅಭಿವೃದ್ಧಿ ಕಾಮಗಾರಿಯು ಪ್ರಾರಂಭವಾಗಿ ಎರಡು ವರ್ಷಗಳಾದರೂ ಇನ್ನೂ ಪೂರ್ಣವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಸರ್ಕ್ಯೂಟ್ ಹೌಸ್ ರಸ್ತೆಯ ಕಾಮಗಾರಿಯನ್ನು ಪೂರ್ಣಗೊಳಿಸಲು ಸರ್ಕಾರಕ್ಕಿರುವ ತೊಂದರೆಗಳೇನು;(ಸಂಪೂರ್ಣ ಮಾಹಿತಿ ನೀಡುವುದು) | ಮೈಸೂರು ಜಿಲ್ಲೆ ಮೈಸೂರು ತಾಲ್ಲೂಕಿನಲ್ಲಿ ಬರುವ ಸರ್ಕ್ಯೂಟ್ ಹೌಸ್ ಜಿಲ್ಲಾ ಮುಖ್ಯ ರಸ್ತೆ ಕಿ.ಮೀ. 0.00 ರಿಂದ 9.60 ವರೆಗೆ (ಆಯ್ದ ಭಾಗಗಳಲ್ಲಿ) 7.80 ಕಿ.ಮೀ ಉದ್ದ ರಸ್ತೆ ಅಭಿವೃದ್ಧಿ ಕಾಮಗಾರಿಯು 2016–17ನೇ ಸಾಲಿನಲ್ಲಿ ಮಂಜೂರಾಗಿರುವ ಕೇಂದ್ರ ರಸ್ತೆ ನಿಧಿ (ಸಿ.ಆರ್.ಎಫ್) 2016–17 ಯೋಜನೆಯಡಿ ಕೈಗೊಳ್ಳಲಾಗಿರುತ್ತದೆ. ಒಟ್ಟು 7.80 ಕಿ.ಮೀ. ರಸ್ತೆ ಅಭಿವೃದ್ಧಿಯಲ್ಲಿ ಪ್ರಸ್ತುತ 2.00 ಕಿ.ಮೀ. ಡಿ.ಬಿ.ಎಂ. ಹಂತದವರೆಗೆ ಪೂರ್ಣಗೊಳಿಸಿದ್ದು, ಉಳಿಕೆ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br><br>ಸದರಿ ಕಾಮಗಾರಿಯನ್ನು ಟೆಂಡರ್ ಆಧಾರದಲ್ಲಿ ವಹಿಸಲಾಗಿರುವ ಗುತ್ತಿಗೆದಾರರು ಕೇಂದ್ರ ರಸ್ತೆ ನಿಧಿ ಲೆಕ್ಕಶೀರ್ಷಿಕೆ ಅನುದಾನದಲ್ಲಿ ಈಗಾಗಲೇ ಪೂರ್ಣಗೊಳಿಸಿರುವ ಇತರೆ ಕಾಮಗಾರಿಗಳ ಬಿಲ್ಲುಗಳ ಹಣ ಪಾವತಿಯಾಗದೇ ಇರುವುದರಿಂದ ಆರ್ಥಿಕ ಮುಗ್ಗಟ್ಟಿನಿಂದಾಗಿ ಹಾಗೂ COVID-19ರ ಕಾರಣ ಕಾಮಗಾರಿ ಪೂರ್ಣಗೊಳಿಸಲು ವಿಳಂಬವಾಗಿದೆಯೆಂದು ತಿಳಿಸಿರುತ್ತಾರೆ. ಉಳಿಕೆ ಕಾಮಗಾರಿಯನ್ನು ಪೂರ್ಣಗೊಳಿಸುವಂತೆ ನೋಟಿಸ್ ನೀಡಲಾಗಿದೆ. ಪ್ರಸ್ತುತ ಕಾಮಗಾರಿಯು ಪ್ರಗತಿಯಲ್ಲಿದ್ದು, ಶೀಘ್ರವಾಗಿ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. |
| ಇ) | ಈ ಕಾಮಗಾರಿಯನ್ನು ಯಾವ ಕಾಲಮಿತಿಯೊಳಗಾಗಿ ಪೂರ್ಣಗೊಳಿಸಲಾಗುವುದು? | ಸದರಿ ಕಾಮಗಾರಿಗೆ ಗುತ್ತಿಗೆ ಕರಾರಿನಂತೆ 9 (ಒಂಬತ್ತು) ತಿಂಗಳು ಕಾಲಮಿತಿ ನೀಡಲಾಗಿದ್ದು, ಫೆಬ್ರವರಿ–20 ರೊಳಗೆ ಪೂರ್ಣಗೊಳಿಸ ಬೇಕಾಗಿದ್ದು, ಆರ್ಥಿಕ ಮುಗ್ಗಟ್ಟಿನಿಂದಾಗಿ ಹಾಗೂ COVID-19ರ ಕಾರಣದಿಂದ ವಿಳಂಬವಾಗಿದ್ದು, ಸದರಿ ಕಾಮಗಾರಿಯನ್ನು ಆಗಸ್ಟ್ 2021 ರ ಅಂತ್ಯಕ್ಕೆ ಪೂರ್ಣಗೊಳಿಸುವುದಾಗಿ ಗುತ್ತಿಗೆದಾರರು ತಿಳಿಸಿದ್ದು, ಅದರಂತೆ ಪೂರ್ಣಗೊಳಿಸಲು ಕ್ರಮಕೈಗೊಳ್ಳಲಾಗುವುದು. |

ಕಡತ ಸಂಖ್ಯೆ: ಲೋಇ 108 ಸಿಎನ್‌ಹೆಚ್ 2021 (ಇ)

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2023
ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್ (ಪುತ್ತೂರು)
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾಣಿ-ಬಾಣೆ, ಖುಷ್ಕಿ, ಸೊಪ್ಪಿನಬೆಟ್ಟ, ಮುಂತಾದ ಭಾಗಗಳಲ್ಲಿ ರೈತರು ಸ್ವಾಧೀನದಲ್ಲಿ ಅನುಭವಿಸುತ್ತಿರುವ ಜಾಗಗಳನ್ನು ಅದರ ಸ್ವಾಧೀನದಾರರಿಗೆ ಸಕ್ರಮೀಕರಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಈ ಬಗ್ಗೆ ಸರ್ಕಾರ ಯಾವ ಕಾಲಮಿತಿಯೊಳಗೆ ಅಗತ್ಯ ಕ್ರಮ ಕೈಗೊಳ್ಳುವುದು? (ಸಂಪೂರ್ಣ ಮಾಹಿತಿ ಒದಗಿಸುವುದು) | ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 79 (2) ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕುಮ್ಕಿ ಭೂಮಿಗಳು, ಬಾಣೆ ಭೂಮಿಗಳು ಮತ್ತು ಕಾಣೆ ಭೂಮಿಗಳು, ಉತ್ತರ ಕನ್ನಡ ಜಿಲ್ಲೆಯಲ್ಲಿನ ಬೆಟ್ಟ ಭೂಮಿಗಳು ಮತ್ತು ಹಾಡಿ ಭೂಮಿಗಳು, ಮೈಸೂರು ಪ್ರದೇಶದಲ್ಲಿನ ಕಾನು ಮತ್ತು ಸೊಪ್ಪಿನ ಬೆಟ್ಟ ಭೂಮಿಗಳು, ಕೊಡಗಿನ ಜಮ್ಮಾ ಮತ್ತು ಬಾಣೆ ಭೂಮಿಗಳು, ಹೈದರಾಬಾದ್ ಪ್ರದೇಶದಲ್ಲಿನ ಮೋಟಸ್ಥಲ್ ತರಿ ಭೂಮಿಗಳು ಇವುಗಳ ಬಗೆಗಿನ ವಿಶೇಷಾಧಿಕಾರಗಳು ಮುಂದುವರೆಯತಕ್ಕದ್ದು ಎಂದು ತಿಳಿಸಲಾಗಿದ್ದು, ಯಾವುದೇ ಭೂಮಿಯನ್ನು ಮಂಜೂರು ಮಾಡಲು ಅವಕಾಶವಿರುವುದಿಲ್ಲ.<br><br>ಮುಂದುವರೆದು, 2021-22 ನೇ ಸಾಲಿನ ಆಯವ್ಯಯದಲ್ಲಿ "ಮೂಲ ಗೇಣಿದಾರರು, ಕುಮ್ಕಿ ಜಮೀನು, ಖಾನೆ, ಬಾನೇ, ಡೀಮ್ಡ್ ಅರಣ್ಯ ಸಾಗುವಳಿದಾರರ ಸಮಸ್ಯೆಗಳ ಕುರಿತು ಅಧ್ಯಯನ ನಡೆಸಿ ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಪ್ರತ್ಯೇಕ ಸಮಿತಿ ರಚಿಸಲಾಗುವುದು" ಎಂದು ಘೋಷಿಸಲಾಗಿದ್ದು, ಅದರಂತೆ ನಿಯಮಾನುಸಾರ ಕ್ರಮವಹಿಸಲಾಗುತ್ತದೆ. |

**ಸಂಖ್ಯೆ: ಆರ್‌ಡಿ 71 ಎಲ್‌ಜಿಕ್ಯೂ 2021**

**(ಆರ್. ಅಶೋಕ)**
**ಕಂದಾಯ ಸಚಿವರು.**

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** :: 2026
**ಸದಸ್ಯರ ಹೆಸರು** :: ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ)
**ಉತ್ತರಿಸುವ ದಿನಾಂಕ** :: 22.03.2021
**ಉತ್ತರಿಸುವ ಸಚಿವರು** :: ಕಂದಾಯ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ತುಮಕೂರು ತಾಲ್ಲೂಕಿಗೆ ಬಗರ್‌ಹುಕುಂ ಸಮಿತಿಯನ್ನು ರಚಿಸಲು ಅನುಮೋದನೆ ನೀಡದಿರಲು ಕಾರಣವೇನು; | ತುಮಕೂರು ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ರಚಿಸಿ ಅಧಿಸೂಚನೆ ಸಂಖ್ಯೆ:ಆರ್‌ಡಿ 11 ಎಲ್‌ಜಿಟಿ 2020ನ್ನು ದಿನಾಂಕ:08.03.2021ರಂದು ಹೊರಡಿಸಲಾಗಿದೆ. (ಪ್ರತಿ ಲಗತ್ತಿಸಿದೆ). |
| ಆ) | ಸದರಿ ಸಮಿತಿ ರಚಿಸಲು ಇನ್ನೂ ಎಷ್ಟು ಕಾಲಾವಕಾಶದ ಅವಶ್ಯಕತೆ ಇದೆ; | |
| ಇ) | ಈ ಸಮಿತಿಯನ್ನು ರಚಿಸಲು ಕಡತ ಸಲ್ಲಿಕೆಯಾಗಿದೆಯೇ; ಯಾವಾಗ ಸಲ್ಲಿಕೆಯಾಗಿದೆ; ಹಾಗಿದ್ದಲ್ಲಿ, ವಿಲೇವಾರಿ ಮಾಡಲು ಇರುವ ತೊಂದರೆಗಳೇನು; | |
| ಈ) | ಸಾರ್ವಜನಿಕರು ಮತ್ತು ರೈತರಿಗೆ ಅನುಕೂಲವಾಗಲು ಯಾವಾಗ ಬಗರ್‌ಹುಕುಂ ಸಮಿತಿಗೆ ಸರ್ಕಾರ ಅನುಮೋದನೆ ನೀಡಲಿದೆ? | |

**ಸಂಖ್ಯೆ: ಆರ್‌ಡಿ 16 ಎಲ್‌ಜಿಟಿ 2021**

(ಆರ್.ಅಶೋಕ್)
**ಕಂದಾಯ ಸಚಿವರು**

<u>ಕರ್ನಾಟಕ ವಿಧಾನಸಭೆ</u>

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2029 |
| ಸದಸ್ಯರ ಹೆಸರು | ಶ್ರೀ. ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) |
| ವಿಷಯ | "ಸಾಮಾಜಿಕ ಪಿಂಚಣಿ ಫಲಾನುಭವಿಗಳಿಗೆ ಪಾವತಿಯಾಗದಿರುವುದು" |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| ಪ್ರಶ್ನೆ | ಉತ್ತರ |
| ಅ) ಕಳೆದ ಜನವರಿ 2020 ರಿಂದ ಈವರೆಗೂ ಕೆಲವು ಫಲಾನುಭವಿಗಳಿಗೆ ಸಾಮಾಜಿಕ ಪಿಂಚಣಿಗಳಾದ ಸಂಧ್ಯಾ ಸುರಕ್ಷಾ, ಅಂಗವಿಕಲ ವೇತನ, ವಿಧವಾ ವೇತನ ಮುಂತಾದವುಗಳು ಪಾವತಿಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿವಿಧ ಸಾಮಾಜಿಕ ಭದ್ರತಾ ಪಿಂಚಣಿ ಯೋಜನೆಗಳಡಿ ಅಸಮರ್ಪಕ ಬ್ಯಾಂಕ್ ಖಾತೆ / ಐ.ಎಫ್.ಎಸ್.ಸಿ ಕೋಡ್ ಹಾಗೂ ವಿಳಾಸ/ಪಿನ್‌ಕೋಡ್ ಕಾರಣದಿಂದ ಪಿಂಚಣಿ ಪಾವತಿಯಾಗದೆ ಸ್ಥಗಿತಗೊಂಡ ಪ್ರಕರಣಗಳಲ್ಲಿ ಪಿಂಚಣಿ ವಿತರಣೆ ವ್ಯತ್ಯಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) ಬಂದಿದ್ದಲ್ಲಿ, ಪಾವತಿಯಾಗದೇ ಇರಲು ಕಾರಣವೇನು; ಯಾವ ಕಾಲಮಿತಿಯೊಳಗೆ ಪಾವತಿ ಮಾಡಲಾಗುವುದು? | ತಾತ್ಕಾಲಿಕವಾಗಿ ಸ್ಥಗಿತಗೊಂಡ ಪ್ರಕರಣಗಳನ್ನು ಕಡ್ಡಾಯ ಭೌತಿಕ ಪರಿಶೀಲನೆಗೆ ಒಳಪಡಿಸಿ, ನಿಖರ ಮಾಹಿತಿಯನ್ನು ಸಂಗ್ರಹಿಸಿ ಕ್ರಮವಹಿಸಲಾಗುತ್ತಿದೆ.<br><br>ಅಸಮರ್ಪಕ ಮಾಹಿತಿಯಿಂದ ಪಿಂಚಣಿ ವ್ಯತ್ಯಯವಾಗಿರುವ ಪ್ರಕರಣಗಳಲ್ಲಿ ಮಂಜೂರಾತಿ ಪ್ರಾಧಿಕಾರಿಗಳಾದ ತಹಸೀಲ್ದಾರರು ಫಲಾನುಭವಿಗಳ ಮಾಹಿತಿಯಲ್ಲಿನ ನ್ಯೂನತೆಯನ್ನು ಸರಿಪಡಿಸಲು ತಂತ್ರಾಂಶದಲ್ಲಿ ಅವಕಾಶ ಮಾಡಿಕೊಡಲಾಗಿದ್ದು, ಮಾಹಿತಿ ಸಂಗ್ರಹಿಸಲಾದ ಪ್ರಕರಣಗಳನ್ನು ಅನುಕಲನೆ ಮೂಲಕ ಖಜಾನೆ-2 ತಂತ್ರಾಂಶಕ್ಕೆ ವರ್ಗಾಯಿಸಿ ಪಿಂಚಣಿ ಪಾವತಿಗೆ ಕ್ರಮವಹಿಸಲಾಗುತ್ತಿದೆ.<br><br>ಮುಂದುವರೆದು, ಬ್ಯಾಂಕ್ ವಿಲೀನದ ಕಾರಣ ಖಾತೆ ಹಾಗೂ ಐ.ಎಫ್.ಎಸ್.ಸಿ ಬದಲಾವಣೆಯಾದ ಪ್ರಕರಣಗಳಲ್ಲಿ ಬ್ಯಾಂಕ್‌ಗಳೊಂದಿಗೆ ಸಮನ್ವಯ ಸಾಧಿಸಿ ಬದಲಾವಣೆಯಾದ ಖಾತೆ ಮಾಹಿತಿಯನ್ನು ಸಂಗ್ರಹಿಸಿ ತಂತ್ರಾಂಶದಲ್ಲಿ ಅಳವಡಿಸಿ ಪಿಂಚಣಿ ಪಾವತಿಗೆ ಕ್ರಮವಹಿಸಲಾಗುತ್ತಿದೆ.<br><br>ಮಂಜೂರಾತಿ ಪ್ರಾಧಿಕಾರಿಗಳಾದ ತಹಶೀಲ್ದಾರರು ಫಲಾನುಭವಿಗಳ ಮಾಹಿತಿಯಲ್ಲಿನ ನ್ಯೂನ್ಯತೆಯನ್ನು ಸರಿಪಡಿಸಿ ಕ್ರಮವಹಿಸಿದ ಪ್ರಕರಣಗಳನ್ನು ಅನುಕಲನೆ ಮೂಲಕ ಖಜಾನೆ-2 ತಂತ್ರಾಂಶಕ್ಕೆ ವರ್ಗಾಯಿಸಿ, ಪಿಂಚಣಿ ಪಾವತಿಗೆ ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: DSSP/LAQ/ 21 /2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2254

ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವ್ಹಾಣ್ (ನಾಗಠಾಣ)

ಉತ್ತರಿಸುವ ದಿನಾಂಕ : 22.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನಾಗಠಾಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬಗರ್‌ಹುಕುಂ ಸಮಿತಿಯನ್ನು ನೇಮಕ ಮಾಡಲು ಪ್ರಸ್ತಾವನೆ ಕಳುಹಿಸಿದ್ದರೂ ಸಮಿತಿಯನ್ನು ನೇಮಕ ಮಾಡಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಬಗರ್‌ಹುಕುಂ ಸಾಗುವಳಿ ಸಮಿತಿ ರಚನೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ನಾಗಠಾಣ ವಿಧಾನಸಭಾ ಕ್ಷೇತ್ರಕ್ಕೆ ಬಗರ್‌ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿ ರಚಿಸುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. ಶೀಘ್ರದಲ್ಲಿಯೇ ಸಮಿತಿಯನ್ನು ರಚಿಸಿ ಅಧಿಸೂಚನೆ ಹೊರಡಿಸಲಾಗುವುದು. |
| ಇ) | ಕಳೆದ ಮೂರು ವರ್ಷಗಳಲ್ಲಿ ಬಗರ್‌ಹುಕುಂ ಸಾಗುವಳಿ ಸಮಿತಿಯಲ್ಲಿ ಸಲ್ಲಿಕೆಯಾದ ಅರ್ಜಿಗಳು ಎಷ್ಟು; ಅದರಲ್ಲಿ ಇತ್ಯರ್ಥಗೊಳಿಸಲಾದ ಅರ್ಜಿಗಳೆಷ್ಟು, ಬಾಕಿ ಉಳಿದಿರುವ ಅರ್ಜಿಗಳೆಷ್ಟು (ವಿವರವಾದ ಮಾಹಿತಿ ನೀಡುವುದು)? | ನಾಗಠಾಣ ವಿಧಾನಸಭಾ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಬಗರ್ ಹುಕುಂ ಸಾಗುವಳಿ ಸಮಿತಿಯಲ್ಲಿ ಸಲ್ಲಿಕೆಯಾದ ಅರ್ಜಿಗಳ ವಿವರ ಕೆಳಗಿನಂತಿದೆ.<br><br>ಸ್ವೀಕೃತಿ: 77 / ಇತ್ಯರ್ಥ: 0 / ಬಾಕಿ: 77 |

| ಸ್ವೀಕೃತಿ | ಇತ್ಯರ್ಥ | ಬಾಕಿ |
|---|---|---|
| 77 | 0 | 77 |

ಆರ್‌ಡಿ 10 ಎಲ್‌ಜಿಜಿ 2021

(ಆರ್.ಅಶೋಕ)
ಕಂದಾಯ ಸಚಿವರು



# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಸುರೇಶ್ ಗೌಡ (ನಾಗಮಂಗಲ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 2666

ಉತ್ತರಿಸಬೇಕಾದ ದಿನಾಂಕ : 22.03.2021.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

<table>
<tr><th>ಕ್ರಸಂ</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ</td><td>2017–18ರಿಂದ ಇಲ್ಲಿಯವರೆಗೂ ನಾಗಮಂಗಲ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಆಕಸ್ಮಿಕವಾಗಿ ಸಾವನ್ನಪ್ಪಿರುವ ಕುರಿ ಮೇಕೆಗಳ ಪರಿಹಾರಕ್ಕಾಗಿ ಸ್ವೀಕರಿಸಲಾಗಿರುವ ಅರ್ಜಿಗಳೆಷ್ಟು; (ವಿವರ ನೀಡುವುದು)</td><td>ಪರಿಹಾರಕ್ಕಾಗಿ ಸ್ವೀಕರಿಸಿರುವ ಅರ್ಜಿಗಳ ವಿವರ:–
<table>
<tr><th>ಕ್ರಸಂ</th><th>ವರ್ಷ</th><th>ಸ್ವೀಕರಿಸಿದ ಅರ್ಜಿಗಳು</th></tr>
<tr><td>1</td><td>2017–18</td><td>133</td></tr>
<tr><td>2</td><td>2018–19</td><td>181</td></tr>
<tr><td>3</td><td>2019–20</td><td>303</td></tr>
</table></td></tr>
<tr><td>ಆ</td><td>ಈ ಪೈಕಿ ಎಷ್ಟು ಅರ್ಜಿಗಳಿಗೆ ಪರಿಹಾರ ನೀಡಲಾಗಿದೆ; ಸಧ್ಯ ಈ ಯೋಜನೆಗಳನ್ನು ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಪರಿಹಾರ ನೀಡಿದ ಅರ್ಜಿಗಳ ಸಂಖ್ಯೆ:–
<table>
<tr><th>ಕ್ರಸಂ</th><th>ವರ್ಷ</th><th>ಪರಿಹಾರ ನೀಡಿದ ಅರ್ಜಿಗಳು</th></tr>
<tr><td>1</td><td>2017–18</td><td>133</td></tr>
<tr><td>2</td><td>2018–19</td><td>181</td></tr>
<tr><td>3</td><td>2019–20</td><td>70</td></tr>
</table>
ಈ ಯೋಜನೆಯನ್ನು ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆ.</td></tr>
<tr><td>ಇ</td><td>ಬಂದಿದ್ದಲ್ಲಿ, ಬಾಕಿ ಪ್ರಕರಣಗಳಿಗೆ ಸರ್ಕಾರದಿಂದ ಯಾವ ಕಾಲಮಿತಿಯೊಳಗಾಗಿ ಹಣ ಬಿಡುಗಡೆ ಮಾಡಲಾಗುವುದು?</td><td>2021–22ನೇ ಸಾಲಿನ ಆಯವ್ಯಯದಲ್ಲಿ ಅನುಗ್ರಹ ಕೊಡುಗೆ ಯೋಜನೆಯನ್ನು ಮುಂದುವರೆಸುವುದಾಗಿ ಘೋಷಿಸಲಾಗಿದೆ. ಕಾಲಮಿತಿಗೆ ಒಳಪಟ್ಟಿರುವುದಿಲ್ಲ.</td></tr>
</table>

ಪಸಂಮೀ ಇ–102 ಸಲೆವಿ 2021

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು,

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸುರೇಶ್ ಗೌಡ (ನಾಗಮಂಗಲ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **2667** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ನಾಗಮಂಗಲ ಪುರಸಭೆ ವ್ಯಾಪ್ತಿಯ ಸುಭಾಷ್ ನಗರದಲ್ಲಿ ನಿರ್ಮಿಸಿರುವ ಮನೆಗಳನ್ನು ಯಾವ ಮಾನದಂಡದ ಪ್ರಕಾರ ಅರ್ಹ ಫಲಾನುಭವಿಗಳಿಗೆ ಹಂಚಿಕೆ ಮಾಡಲಾಗಿದೆ ; ಎಷ್ಟು ಮನೆಗಳನ್ನು ಹಂಚಲಾಗಿದೆ ; ಇನ್ನೂ ಬಾಕಿ ಇರುವ ಮನೆಗಳೆಷ್ಟು ; (ವಿವರ ನೀಡುವುದು) | ನಾಗಮಂಗಲ ಪಟ್ಟಣದ ಸುಭಾಷ್ ಚಂದ್ರ ಭೋಷ್ ನಗರ ಕೊಳಚೆ ಪ್ರದೇಶದಲ್ಲಿ ನಿರ್ಮಿಸಿರುವ ಮನೆಗಳ ಫಲಾನುಭವಿಗಳ ಪಟ್ಟಿಯನ್ನು ನಾಗಮಂಗಲ ಪಟ್ಟಣ ಪಂಚಾಯತ್ ನಿಂದ ದಿನಾಂಕ:06-01-2001 ರಲ್ಲಿ ಅನುಮೋದನೆ ನೀಡಿ, ಪಟ್ಟಣ ಪಂಚಾಯತ್ ರವರು 9.39 ಎಕರೆ ಜಮೀನನ್ನು ಮಂಡಳಿಗೆ ಹಸ್ತಾಂತರಿಸಿದ್ದು, ಸದರಿ ಫಲಾನುಭವಿಗಳಿಗೆ ನಿವೇಶನ ಹಕ್ಕು ಪತ್ರವನ್ನು ವಿತರಿಸಿದ್ದು, ಸದರಿ ಫಲಾನಭವಿಗಳಿಗೆ ಮನೆಗಳನ್ನು ನಿರ್ಮಿಸಲು ದಿನಾಂಕ:28-06-2008 ರಂದು ಕೋರಿರುತ್ತಾರೆ.<br><br>ಅದರಂತೆ ಪಟ್ಟಣ ಪಂಚಾಯತ್ ರವರು ಹಸ್ತಾಂತರಿಸಿರುವ ಜಮೀನಿನಲ್ಲಿ ಮನೆಗಳನ್ನು ನಿರ್ಮಿಸಿ ಪೂರ್ಣಗೊಳಿಸಲಾಗಿದೆ. ಫಲಾನುಭವಿಗಳಿಗೆ ಮನೆಯ ಹಕ್ಕು/ ಹಂಚಿಕೆ ಪತ್ರ ನೀಡಿರುವ ವಿಷಯ ಪುರಸಭೆಯ ವ್ಯಾಪ್ತಿಗೆ ಬರುತ್ತದೆ. |
| (ಆ) | ಅನರ್ಹರು ಅತಿಕ್ರಮಣ ಮಾಡಿ ಮನೆಗಳನ್ನು ತಮ್ಮ ವಶಕ್ಕೆ ಪಡೆದು ವಾಸಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ. ಸದರಿ 226 ಮನೆಗಳ ಪೈಕಿ ಕೆಲವು ಮನೆಗಳಲ್ಲಿ ಹಕ್ಕು ಪತ್ರ ಹೊಂದಿಲ್ಲದೇ ಇರುವವರು ಅತಿ ಕ್ರಮಣ ಮಾಡಿ ವಾಸಿಸುತ್ತಿರುವ ಬಗ್ಗೆ ಸಮೀಕ್ಷೆ ನಡೆಸಲು ಮಾನ್ಯ ಜಿಲ್ಲಾಧಿಕಾರಿಗಳು, ಮಂಡ್ಯ ರವರು ದಿ: 3.7.2019ರ ಅಧಿಕೃತ ಜ್ಞಾಪನದಲ್ಲಿ ನಾಗಮಂಗಲ ಡಿ.ವೈ.ಎಸ್.ಪಿ. ರವರ ನೇತೃತ್ವದಲ್ಲಿ ಪರಿಶೀಲನಾ ತಂಡವನ್ನು ನೇಮಿಸಿ ಆದೇಶಿಸಿದ್ದು, ಸದರಿ ಸಮಿತಿ ವರದಿ ಬಂದ ನಂತರ ಅನರ್ಹ ನಿವಾಸಿಗಳನ್ನು ತೆರವುಗೊಳಿಸಿ ಅರ್ಹರಿಗೆ ಹಕ್ಕು ಪತ್ರ ನೀಡುವ ಬಗ್ಗೆ ನಿಯಮಾನುಸಾರ ಕ್ರಮವಹಿಸಲಾಗುವುದು. |
| (ಇ) | ಬಂದಿದ್ದಲ್ಲಿ, ಅಂತಹವರ ವಿರುದ್ಧ ದೂರು ದಾಖಲಿಸಿ ಕ್ರಮ ಕೈಗೊಂಡು, ಮನೆಗಳನ್ನು ಹಿಂಪಡೆದು ಅರ್ಹ ಫಲಾನುಭವಿಗಳಿಗೆ ಹಂಚಲು ಇದುವರೆವಿಗೂ ಕ್ರಮ ಕೈಗೊಳ್ಳದೆ ಇರಲು ಕಾರಣವೇನು ; | |
| (ಈ) | ಈಗಲಾದರೂ ಅರ್ಹರಿಗೆ ಮನೆಗಳನ್ನು ಹಂಚಲು ಸರ್ಕಾರ ಕ್ರಮ ಕೈಗೊಳ್ಳುವುದೇ ? | |

ಸಂಖ್ಯೆ :ವಇ 51 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2679 |
| ಸದಸ್ಯರ ಹೆಸರು | : | ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) |
| ಉತ್ತರಿಸುವ ದಿನಾಂಕ | : | 22-03-2021 |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಂತಾಮಣಿ ತಾಲ್ಲೂಕು, ಕಸಬಾ ಹೋಬಳಿ, ಎಕ್ಕುಂದಿ ಗ್ರಾಮದ ಸ.ನಂ.19-20-21 ರ ಕೃಷಿ ಜಮೀನನ್ನು ನಗರಾಭಿವೃದ್ಧಿ ಕೋಶ ಮತ್ತು ಜಿಲ್ಲಾಧಿಕಾರಿಗಳ ಆದೇಶ/ನಿಯಮಗಳಂತೆ ವಾಸದ ಉಪಯೋಗಕ್ಕಾಗಿ ವ್ಯವಸಾಯ ಜಮೀನನ್ನು ವ್ಯವಸಾಯೇತರ ಜಮೀನನ್ನಾಗಿ ಬದಲಾವಣೆ ಮಾಡದೆ, ನಗಾರಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆಯನ್ನು ಪಡೆಯದೆ ನಿವೇಶನಗಳನ್ನಾಗಿ ಮಾರಾಟ ಮಾಡಿ ಖರೀದಿದಾರರಿಗೆ ವಂಚಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ತಾಲ್ಲೂಕು, ಕಸಬಾ ಹೋಬಳಿ, ಎಕ್ಕುಂದಿ ಗ್ರಾಮದ ಸ.ನಂ.19 ಮತ್ತು 21 ರ ಜಮೀನುಗಳ ಖಾತೆದಾರರು ಮಾರಾಟ ಮಾಡಲು ನಿವೇಶನಗಳನ್ನಾಗಿ ವಿಂಗಡಿಸಿ ಕಲ್ಲುಗಳನ್ನು ಹಾಕಿರುತ್ತಾರೆ.<br>ನಂತರದಲ್ಲಿ ಜಿಲ್ಲಾಧಿಕಾರಿಗಳ ಭೂಪರಿವರ್ತನೆ ಆದೇಶವಿಲ್ಲದ ನಿವೇಶನಗಳನ್ನು ಮಾಡತಕ್ಕದ್ದಲ್ಲ ಎಂದು ಹಾಕಿರುವ ಕಲ್ಲುಗಳನ್ನು ತೆರವುಗೊಳಿಸಲಾಗಿದೆ ಹಾಗೂ ಇನ್ನು ಮುಂದೆ ಸದರಿ ಜಮೀನಿನಲ್ಲಿ ಯಾವುದೇ ಭೂಪರಿವರ್ತನೆ ಆದೇಶವಿಲ್ಲದೆ ಅಭಿವೃದ್ಧಿ ಕಾರ್ಯ ನಡೆಸಿದ್ದಲ್ಲಿ ಕಾನೂನು ರೀತ್ಯಾ ಕ್ರಮಕೈಗೊಳ್ಳುವುದಾಗಿ ಸಂಬಂಧಪಟ್ಟ ಖಾತೆದಾರರಿಗೆ ಎಚ್ಚರಿಕೆ ನೀಡಲಾಗಿರುತ್ತದೆ.<br>ಪ್ರಸ್ತಾಪಿತ ಸ.ನಂ.20ರ 0-08 ಗುಂಟೆ ಜಮೀನು ಹಾಲಿ ಆರ್‌ಟಿಸಿ ಕಾಲಂ 9ರಂತೆ ಹಜಾಂ ಇನಾಂತಿ, ಸರ್ಕಾರಿ ಇನಾಂತಿ ಜಮೀನಾಗಿದ್ದು, ಹಾಲಿ ಬೀಳಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಸದರಿ ಜಮೀನಿನ (ಲೇಔಟ್) ಮಾಲೀಕರ ಮೇಲೆ ಮೊಕ್ಕದ್ದಮೆಯನ್ನು ದಾಖಲಿಸಲಾಗಿದೆಯೇ; | ಅನಧಿಕೃತ ನಿವೇಶನಗಳ ವಿಂಗಡನೆಗೊಳಿಸಲು ಗುರುತಿಸಿ ನೆಟ್ಟಿರುವಂತಹ ಕಲ್ಲುಗಳನ್ನು ತೆರವುಗೊಳಿಸಿದ್ದು, ವಂಚನೆಗೆ ಒಳಗಾದವರು ಅಥವಾ ಯಾರಾದರು ದೂರು ನೀಡಿದಲ್ಲಿ ನಿಯಮಾನುಸಾರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು. |
| ಇ) | ಹಾಗಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; ವಂಚನೆಗೆ ಒಳಗಾದವರಿಗೆ ನ್ಯಾಯವನ್ನು ಒದಗಿಸಲಾಗಿದೆಯೇ?(ಸಂಪೂರ್ಣ ವಿವರ ನೀಡುವುದು)? | ಅನ್ವಯಿಸುವುದಿಲ್ಲ. |

**ಸಂಖ್ಯೆ: ಆರ್‌ಡಿ 65 ಎಲ್‌ಜಿಕ್ಯೂ 2021**

**(ಆರ್. ಅಶೋಕ)**
**ಕಂದಾಯ ಸಚಿವರು.**

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2668 |
| ಸದಸ್ಯರ ಹೆಸರು | : | ಶ್ರೀ ಸುರೇಶ್‌ಗೌಡ [ನಾಗಮಂಗಲ] |
| ವಿಷಯ | : | ಫಲಾನುಭವಿಗಳಿಗೆ ಧನಸಹಾಯ |
| ಉತ್ತರಿಸಬೇಕಾದ ದಿನಾಂಕ | : | 22/3/2021 |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ನಾಗಮಂಗಲ ವಿಧಾನಸಭಾ ವ್ಯಾಪ್ತಿಯಲ್ಲಿ 2018-19 ರಿಂದ ಇಲ್ಲಿಯವರೆಗೆ ಎನ್.ಎಸ್.ಎ.ಪಿ. ಯೋಜನೆಯಿಂದ ರೂ. 20,000/- ಗಳ ಧನಸಹಾಯವನ್ನು ಎಷ್ಟು ಜನ ಫಲಾನುಭವಿಗಳಿಗೆ ನೀಡಲಾಗಿದೆ: ಎಷ್ಟು ಬಾಕಿ ಇದೆ [ಸಂಪೂರ್ಣ ವಿವರ ನೀಡುವುದು]. | ನಾಗಮಂಗಲ ವಿಧಾನಸಭಾ ವ್ಯಾಪ್ತಿಯಲ್ಲಿ 2018-19 ರಿಂದ ಇಲ್ಲಿಯವರೆಗೆ ರಾಷ್ಟ್ರೀಯ ಕುಟುಂಬ ನೆರವು ಯೋಜನೆಯಿಂದ ರೂ. 20,000/- ಗಳ ಧನಸಹಾಯವನ್ನು 156 ಜನ ಫಲಾನುಭವಿಗಳಿಗೆ ನೀಡಲಾಗಿದೆ. ವರ್ಷವಾರು ವಿವರ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ ನೋಡಿ) |

| ಸಾಲು | ಸ್ವೀಕೃತಿಯಾದ ಅರ್ಜಿಗಳು | ಸಹಾಯಧನ ಪಡೆದ ಫಲಾನುಭವಿಗಳ ಸಂಖ್ಯೆ | ಸಹಾಯಧನ ಪಡೆಯಲು ಬಾಕಿ ಇರುವ ಫಲಾನುಭವಿಗಳ ಸಂಖ್ಯೆ |
|---|---|---|---|
| 2018-19 | 214 | 24 | 190 |
| 2019-20 | 296 | 62 | 234 |
| 2020-21 | 244 | 52 | 192 |

ಸೌಲಭ್ಯ ವಿತರಣೆಗೆ 192 ಪ್ರಕರಣಗಳು ಬಾಕಿಯಿರುತ್ತವೆ.

| | ಪ್ರಶ್ನೆ | ಉತ್ತರ |
|---|---|---|
| ಆ | ಹಲವಾರು ಫಲಾನುಭವಿಗಳಿಗೆ ಇದುವರೆವಿಗೂ ಧನ ಸಹಾಯ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ : | ರಾಷ್ಟ್ರೀಯ ಕುಟುಂಬ ನೆರವು ಯೋಜನೆಯು ಸಂಪೂರ್ಣ ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು ಸದರಿ ಯೋಜನೆಗೆ ಕೇಂದ್ರ ಸರ್ಕಾರವು 18312 ಫಲಾನುಭವಿಗಳಿಗೆ ಅನುದಾನ ಮಿತಿಗೊಳಿಸಿದೆ. ಸದರಿ ಯೋಜನೆಯ ಫಲಾನುಭವಿಗಳ ಮಿತಿಯನ್ನು ಹೆಚ್ಚಿಸುವ ಕುರಿತು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. |
| ಇ | ಬಂದಿದ್ದಲ್ಲಿ ಹಣ ಬಿಡುಗಡೆ ಮಾಡಲು ಸರ್ಕಾರ ಸೂಕ್ತ ಕ್ರಮ ಕೈಗೊಳ್ಳುವುದೆ | |

ಸಂಖ್ಯೆ : ಡಿಎಸ್‌ಎಸ್‌ಪಿ - ಎಲ್‌ಎಕ್ಯೂ 22/2021

[ಆರ್. ಅಶೋಕ],
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2674 |
| ಸದಸ್ಯರ ಹೆಸರು | ಶ್ರೀ ಪುಟ್ಟರಂಗ ಶೆಟ್ಟಿ ಸಿ |
| ಉತ್ತರಿಸುವ ದಿನಾಂಕ: | 22-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮುಜರಾಯಿ ಇಲಾಖೆಗೆ ಸಂಬಂಧಿಸಿದಂತೆ ಒಟ್ಟು ಎಷ್ಟು ದೇವಾಲಯಗಳಿವೆ; | ರಾಜ್ಯದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ಅಧೀನದಲ್ಲಿ ಒಟ್ಟು 34,564 ಅಧಿಸೂಚಿತ ಸಂಸ್ಥೆಗಳಿವೆ. |
| ಆ | ಇಲಾಖೆಯ ವ್ಯಾಪ್ತಿಯಲ್ಲಿರುವ ಎಲ್ಲಾ ದೇವಾಲಯಗಳನ್ನು ಸಮರ್ಪಕವಾಗಿ ಸಂರಕ್ಷಿಸಿ ನಿರ್ವಹಿಸಲಾಗುತ್ತಿದೆಯೇ; ಇಲ್ಲವಾದಲ್ಲಿ, ಕಾರಣಗಳೇನು; | ಇಲಾಖಾ ವ್ಯಾಪ್ತಿಯಲ್ಲಿ ಬರುವ ದೇವಾಲಯಗಳನ್ನು ಸಂರಕ್ಷಿಸಿ ಸಮರ್ಪಕವಾಗಿ ನಿರ್ವಹಿಸಲು ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯ 1997 ನಿಯಮಾವಳಿ 2002ರ ಅನ್ವಯ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ | ಲಾಕ್‌ಡೌನ್ ಅವಧಿಯಲ್ಲಿ ಮುಜರಾಯಿ ಇಲಾಖೆಯ ಹಲವು ದೇವಾಲಯಗಳು ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬವಂದಿದೆಯೇ; | ಪ್ರಸ್ತುತ ಈವರೆವಿಗೂ ಲಾಕ್‌ಡೌನ್ ಅವಧಿಯಲ್ಲಿ ಧಾರ್ಮಿಕ ದತ್ತಿ ಇಲಾಖೆಯ ದೇವಲಯಗಳು ಸಂಪೂರ್ಣ ಹಾಳಾಗಿರುವ ಅಂತಹ ಯಾವುದೇ ದೂರು/ಪ್ರಸ್ತಾವನೆಗಳು ಸಾರ್ವಜನಿಕರಿಂದ ಮತ್ತು ಜಿಲ್ಲಾಧಿಕಾರಿಗಳಿಂದ ಸ್ವೀಕೃತವಾಗಿರುವುದಿಲ್ಲ. |
| ಈ | ಬಂದಿದ್ದಲ್ಲಿ, ಶಿಥಿಲಾವಸ್ಥೆಯಲ್ಲಿರುವ ದೇವಾಲಯಗಳ ಪುನಶ್ಚೇತನಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಯಾವ ಕಾಲಮಿತಿಯೊಳಗೆ ಪುನಶ್ಚೇತಗೊಳಿಸಲಾಗುವುದು? | ಶಿಥಿಲಾವಸ್ಥೆಯಲ್ಲಿರುವ ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಯಲ್ಲಿರುವ ಪುನಶ್ಚೇತನಕ್ಕಾಗಿ ಪ್ರತಿ ಆರ್ಥಿಕ ವರ್ಷದಲ್ಲಿ ಈ ಕೆಳಕಂಡ ಯೋಜನೆಗಳಡಿ ಅನುದಾನವನ್ನು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ.<br><br>ಯೋಜನೆ ವಿವರ:<br>ದುರಸ್ಥಿ ಜೀರ್ಣೋದ್ಧಾರ/ಅಭಿವೃದ್ಧಿ ಯೋಜನೆ<br>ಆರಾಧನಾ ಯೋಜನೆ<br>ಪರಿಶಿಷ್ಟಜಾತಿ ಉಪಯೋಜನೆ<br>ಗಿರಿಜನ ಉಪಯೋಜನೆ<br>ಸಾಮಾನ್ಯ ಸಂಗ್ರಹಣಾ ನಿಧಿಯಿಂದ ಧನ ಸಹಾಯ<br><br>ದೇವಾಲಯಗಳನ್ನು ಮಾದರಿ ದೇವಾಲಯಗಳನ್ನಾಗಿ ಮಾಡುವ ಬಗ್ಗೆ ಧಾರ್ಮಿಕ ದತ್ತಿ ಆಯುಕ್ತರ ಸುತ್ತೋಲೆ ಸಂಖ್ಯೆಸಿ.ಎಸ್.ಆರ್/1/ಸಿಆರ್/346/2010-11, ದಿನಾಂಕ:22.03.2011ರನ್ವಯ ಕ್ರಮ ಕೈಗೊಳ್ಳಲು ನಿರ್ದೇಶನ ನೀಡಲಾಗಿರುತ್ತದೆ. |

(ಸಂಖ್ಯೆಕಂಇ 78 ಮುಸಪ್ರ 2021)

**(ಕೋಟಾ ಶ್ರೀನಿವಾಸ ಪೂಜಾರಿ)**
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2683 |
| ಮಾನ್ಯ ಸದಸ್ಯರ ಹೆಸರು | : | ಶ್ರೀ.ಗಣೇಶ್ ಜೆ.ಎನ್. (ಕಂಪ್ಲಿ) |
| ಉತ್ತರಿಸುವ ದಿನಾಂಕ | : | 22-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಂಪ್ಲಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕಂಪ್ಲಿ ಮತ್ತು ಗಂಗಾವತಿ ಸೇತುವೆ 50 ವರ್ಷ ಹಳೆಯದಾಗಿದ್ದು, ಮಳೆಗಾಲದ ಸಮಯದಲ್ಲಿ ಅಲ್ಲಿನ ರಸ್ತೆ ಸಂಪರ್ಕ ಸ್ಥಗಿತವಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಂಪ್ಲಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕಂಪ್ಲಿ ಮತ್ತು ಗಂಗಾವತಿ ಸೇತುವೆ 50 ವರ್ಷ ಹಳೆಯದಾಗಿದ್ದು, ಮಳೆಗಾಲದ ಸಮಯದಲ್ಲಿ ತುಂಗಭದ್ರ ಜಲಾಶಯ ಭರ್ತಿಯಾದಾಗ ಸುಮಾರು 1 ಲಕ್ಷ ಕ್ಯೂಸೆಕ್ಸ್ ನೀರು ಬಿಟ್ಟಾಗ ಸದರಿ ಸೇತುವೆ ಮುಳುಗಡೆಯಾಗಿ ರಸ್ತೆ ಸಂಪರ್ಕ ಸ್ಥಗಿತವಾಗುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಇದರಿಂದ ಈ ಕ್ಷೇತ್ರದ ಜನ ಸಾಮಾನ್ಯರಿಗೆ ತೊಂದರೆಯಾಗುವುದನ್ನು ತಪ್ಪಿಸಲು ಸರ್ಕಾರ ತೆಗೆದುಕೊಂಡ ಕ್ರಮವೇನು; (ಪೂರ್ಣ ಮಾಹಿತಿ ನೀಡುವುದು) | ಸದರಿ ಸೇತುವೆ ಮರುನಿರ್ಮಾಣಕ್ಕೆ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿ, ಆರ್ಥಿಕ ಇಲಾಖೆಯು ಈಗಾಗಲೇ ಕೆ.ಆರ್.ಡಿ.ಸಿ.ಎಲ್. ನಿಂದ ತೆಗೆದುಕೊಳ್ಳಲಾದ ಸೇತುವೆ ಕಾಮಗಾರಿಗಳ ಕಾರ್ಯಭಾರ ಅಧಿಕವಾಗಿದ್ದು, ತೆಗೆದುಕೊಳ್ಳಲಾದ ಕಾಮಗಾರಿಗಳು ಭೌತಿಕವಾಗಿ ಮತ್ತು ಆರ್ಥಿಕವಾಗಿ ಮುಕ್ತಾಯವಾಗುವವರೆಗೆ ಯಾವುದೇ ಹೊಸ ಕಾಮಗಾರಿಗಳ ಪ್ರಸ್ತಾವನೆಯನ್ನು ಸಲ್ಲಿಸದಿರುವಂತೆ ಆರ್ಥಿಕ ಇಲಾಖೆಯು ತಿಳಿಸಿರುವ ಹಿನ್ನೆಲೆಯಲ್ಲಿ ಸದರಿ ಸೇತುವೆಯ ನಿರ್ಮಾಣದ ಪ್ರಸ್ತಾವನೆಯನ್ನು ಸಧ್ಯಕ್ಕೆ ಕೈಬಿಡಲಾಗದೆ. |
| ಇ) | ಈ ರಸ್ತೆ ಸಂಪರ್ಕಕ್ಕೆ ಹೊಸದಾಗಿ ಸೇತುವೆ ನಿರ್ಮಾಣದ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | |

ಸಂಖ್ಯೆ:ಲೋಇ ಇ- 129 ಇಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ



**ಕರ್ನಾಟಕ ವಿಧಾನ ಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2684
ಸದಸ್ಯರ ಹೆಸರು : ಶ್ರೀ. ಐಹೊಳೆ ಡಿ.ಮಹಾಲಿಂಗಪ್ಪ
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ರಾಯಭಾಗ ಪಟ್ಟಣ ಪಂಚಾಯ್ತಿ ವ್ಯಾಪ್ತಿಯಲ್ಲಿ ಸಮಾಜ ಕಲ್ಯಾಣ ಇಲಾಖೆಯ ವಸತಿ ನಿಲಯ ಕಟ್ಟಡ ನಿರ್ಮಾಣ ಮಾಡಲು ನಿವೇಶನವನ್ನು ಗುರುತಿಸಿ, ಕಾಯ್ದಿರಿಸಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಸದರಿ ನಿವೇಶನಕ್ಕೆ ಖಾಸಗಿ ವ್ಯಕ್ತಿಗಳ ಹೆಸರಿನಲ್ಲಿ ನಕಲಿ ದಾಖಲೆಗಳನ್ನು ಸೃಷ್ಠಿಸಿ ಅತಿಕ್ರಮಣ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬಂದಿದ್ದಲ್ಲಿ, ಸರ್ಕಾರ ಸಮಾಜ ಕಲ್ಯಾಣ ಇಲಾಖೆಯ ವಸತಿ ನಿವೇಶನವನ್ನು ವಶಕ್ಕೆ ಪಡೆದುಕೊಂಡು ಖಾಸಗಿ ವ್ಯಕ್ತಿಗಳ ಹೆಸರಿನಲ್ಲಿ ಸೃಷ್ಠಿಸಿರುವ ನಕಲಿ ದಾಖಲೆಗಳನ್ನು ರದ್ದು ಪಡಿಸಲು ಸರ್ಕಾರ ಅಗತ್ಯ ಕ್ರಮ ಕೈಗೊಳ್ಳುವುದೇ; | ಬೆಳಗಾವಿ ಜಿಲ್ಲೆ, ರಾಯಭಾಗ ಪಟ್ಟಣದ. ರೈಲ್ವೇ ಸ್ಟೇಶನ್ ರಸ್ತೆಗೆ ಹೊಂದಿಕೊಂಡಿರುವ ಪಟ್ಟಣ ಪಂಚಾಯತಿ ಆಸ್ತಿ ನಂಬರ್ 2082 ಹಾಗೂ 2675 ರಲ್ಲಿನ 17214.07 ಚದರ ಅಡಿ ವಿಸ್ತೀರ್ಣದ ಆಸ್ತಿಯು ಸಮಾಜ ಕಲ್ಯಾಣ ಇಲಾಖೆಗೆ ಸೇರಿರುತ್ತದೆ. ಸದರಿ ಆಸ್ತಿಯನ್ನು ಕಬಳಿಸುವ ಉದ್ದೇಶದಿಂದ ಖಾಸಗಿ ವ್ಯಕ್ತಿಗಳು ನಕಲಿ ದಾಖಲಾತಿಗಳನ್ನು ಸೃಷ್ಟಿಸಿರುತ್ತಾರೆ. ಈ ಕುರಿತು ಮಾನ್ಯ ಪ್ರಥಮ ದರ್ಜೆ ನ್ಯಾಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ರಾಯಭಾಗ ಇಲ್ಲಿ ನಂ.508/2019 ರನ್ವಯ ಪ್ರಕರಣ ದಾಖಲಾಗಿದ್ದು, ವಿಚಾರಣೆಯ ಹಂತದಲ್ಲಿರುತ್ತದೆ. ವಿಚಾರಣೆ ಮುಕ್ತಾಯಗೊಂಡ ನಂತರ ಮಾನ್ಯ ನ್ಯಾಯಾಲಯದ ಆದೇಶದನ್ವಯ ಅಗತ್ಯ ಕ್ರಮ ಕೈಗೊಳ್ಳಲಾಗುವುದು. |
| ಈ) | ಹಾಗಿದ್ದಲ್ಲಿ, ತಪ್ಪಿತಸ್ಥರ ವಿರುದ್ಧ ಸರ್ಕಾರ ಕಾನೂನಾತ್ಮಕ ಕಠಿಣ ಕ್ರಮಗಳನ್ನು ಕೈಗೊಳ್ಳುವುದೇ; ಇಲ್ಲದಿದ್ದಲ್ಲಿ, ಕಾರಣಗಳೇನು? (ಸಂಪೂರ್ಣ ವಿವರ ನೀಡುವುದು) | |

ಸಕಇ 128 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2689 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಜಯ್ ಧರ್ಮ ಸಿಂಗ್ ಡಾ|| (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ವಿವಿಧ ಕುಲಕಸುಬು ಮಾಡುತ್ತಿರುವ ಮಡಿವಾಳ, ಸವಿತಾಸಮಾಜ/ ಹಡಪದ, ಕುಂಬಾರ, ಬಡಗಿ ಅಕ್ಕಸಾಲಿಗ, ನೇಕಾರ ಇನ್ನು ಮುಂತಾದ ಕುಲಕಸುಬುದಾರರು ಎಷ್ಟು ಜನ ವಾಸವಾಗಿದ್ದಾರೆ; ಯಾವ ಯಾವ ತಾಲ್ಲೂಕಿನಲ್ಲಿ ಎಷ್ಟು ಜನ ಕುಲಕಸುಬುದಾರರು ವಾಸವಾಗಿದ್ದಾರೆ; (ತಾಲ್ಲೂಕುವಾರು ವಿವರ ನೀಡುವುದು) | ರಾಜ್ಯದಲ್ಲಿ ವಿಶ್ವಕರ್ಮ ಸಮುದಾಯಕ್ಕೆ ಸೇರಿದ ಬಡಗಿ, ಅಕ್ಕಸಾಲಿಗ, ಕಮ್ಮಾರ, ಎರಕದ ಕೆಲಸ ಮತ್ತು ಶಿಲ್ಪಿ ಕೆಲಸ ಮಾಡುವ ಕುಲಕಸುಬುದಾರರು ಒಟ್ಟು ಅಂದಾಜು ಮಾಹಿತಿಯಂತೆ 35.00 ಲಕ್ಷ ಇರುವುದಾಗಿ ತಿಳಿದುಬಂದಿದೆ. ವಿಶ್ವಕರ್ಮ ಸಮುದಾಯದವರ ತಾಲ್ಲೂಕು ಮತ್ತು ಜಿಲ್ಲಾವಾರು ಜನಸಂಖ್ಯೆಯ ಮಾಹಿತಿ ಲಭ್ಯವಿರುವುದಿಲ್ಲ. ಮುಂದುವರೆದು, ಕುಲಕಸುಬು ಮಾಡುತ್ತಿರುವ ಮಡಿವಾಳ, ಸವಿತ/ಹಡಪದ ಸಮಾಜ, ಕುಂಬಾರ & ನೇಕಾರ ಮುಂತಾದ ಸಮುದಾಯದವರ ಜನಸಂಖ್ಯೆ ಕುರಿತು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಮಾಹಿತಿ ಇರುವುದಿಲ್ಲ. |
| ಆ) | ಈ ಕುಲ ಕಸುಬುದಾರರು ಲಾಕ್‌ಡೌನ್ ಸಮಯದಲ್ಲಿ ತಯಾರಿಸಿದ ಉತ್ಪನ್ನಗಳು ಮಾರಾಟವಾಗದೇ, ಕಷ್ಟಕ್ಕೆ ಗುರಿಯಾಗಿರುವವರ ಸಮೀಕ್ಷೆ ಮಾಡಲಾಗಿದೆಯೇ; (ತಾಲ್ಲೂಕುವಾರು ವಿವರಗಳನ್ನು ನೀಡುವುದು) : | ಸಮೀಕ್ಷೆ ಮಾಡಿರುವುದಿಲ್ಲ. |
| ಇ) | ಇಂತಹವರಿಗೆ ವಿಶೇಷ ಅನುದಾನದ ರೂಪದಲ್ಲಿ ಸರ್ಕಾರ ನೀಡಲಾದ ಮೊತ್ತವೆಷ್ಟು; ಅನುದಾನವನ್ನು ಪಡೆದವರ ಸಂಖ್ಯೆ ಎಷ್ಟು? (ತಾಲ್ಲೂಕುವಾರು ವಿವರಗಳನ್ನು ನೀಡುವುದು): | ಈ ಸಮುದಾಯದವರಿಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಯಾವುದೇ ವಿಶೇಷ ಅನುದಾನದ ನೀಡಲಾಗಿರುವುದಿಲ್ಲ. |

**ಸಂಖ್ಯೆ:**ಹಿಂವಕ 93 ಬಿಸಿಎ 2021

(ಕೋಟಾ ಶ್ರೀನಿವಾಸ ಪೂಜಾರಿ)
ಮುಜರಾಯಿ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

1) **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:** 2692

2) **ಸದಸ್ಯರ ಹೆಸರು** ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)

3) **ಉತ್ತರಿಸಬೇಕಾದ ದಿನಾಂಕ** 22-03-2021

4) **ಉತ್ತರಿಸಬೇಕಾದ ಸಚಿವರು** ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮತ್ಸ್ಯಾಶ್ರಯ ಯೋಜನೆ ಯಡಿಯಲ್ಲಿ ಕಳೆದ 3 ವರ್ಷಗಳಿಂದ ಪ್ರಸ್ತುತ ಅವಧಿಯವರೆಗೂ ಕೋಲಾರ ಜಿಲ್ಲೆಗೆ ಮಂಜೂರು ಮಾಡಲಾದ ಮನೆಗಳ ಸಂಖ್ಯೆ ಎಷ್ಟು; | ಮತ್ಸ್ಯಾಶ್ರಯ ಯೋಜನೆಯಡಿಯಲ್ಲಿ ಕಳೆದ 3 ವರ್ಷಗಳಿಂದ ಪ್ರಸ್ತುತ ಅವಧಿಯವರೆಗೆ ಕೋಲಾರ ಜಿಲ್ಲೆಗೆ 40 ಮನೆಗಳನ್ನು ಮಂಜೂರು ಮಾಡಲಾಗಿದೆ. ವಿವರಗಳು ಕೆಳಕಂಡಂತಿದೆ:- (see table below) 2019-20 ಮತ್ತು 2020-21ನೇ ಸಾಲಿಗೆ ಯಾವುದೇ ಮನೆಗಳು ಹಂಚಿಕೆಯಾಗಿರುವುದಿಲ್ಲ. |
| ಆ) | ಈ ಪೈಕಿ ಪೂರ್ಣಗೊಂಡ ಮನೆಗಳ ಸಂಖ್ಯೆ ಎಷ್ಟು; ಪ್ರಾರಂಭಿಸದೆ ಇರುವ ಮನೆಗಳ ಸಂಖ್ಯೆ ಎಷ್ಟು? (ವಿವರ ನೀಡುವುದು) | ಈ ಪೈಕಿ ಇದುವರೆಗೂ ಯಾವುದೇ ಮನೆಗಳ ನಿರ್ಮಾಣ ಪ್ರಾರಂಭವಾಗಿರುವುದಿಲ್ಲ. |

| ಕ್ರ. ಸಂ. | ವಿಧಾನಸಭಾ ಕ್ಷೇತ್ರ | ವರ್ಷವಾರು ಹಂಚಿಕೆ ಮಾಡಿದ ಮನೆಗಳ ವಿವರ |
|---|---|---|
| | | 2018-19 |
| 1 | ಮುಳಬಾಗಿಲು | 15 |
| 2 | ಕೋಲಾರ ಗೋಲ್ಡ್ ಫೀಲ್ಡ್ | 15 |
| 3 | ಕೋಲಾರ | 10 |
| | ಒಟ್ಟು | 40 |

**ಸಂಖ್ಯೆ: ಪಸಂಮೀ ಇ-107 ಮೀಇಯೋ 2021**

(ಎಸ್. ಅಂಗಾರ) 19/3/2021
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2701 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕುಷ್ಟಗಿ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ಮೆಟ್ರಿಕ್-ಪೂರ್ವ/ನಂತರದ ವಸತಿನಿಲಯಗಳನ್ನು ಮಂಜೂರು ಮಾಡುವ ಉದ್ದೇಶವಿದೆಯೇ; | ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಪ್ರಸ್ತುತ 10 ಮೆಟ್ರಿಕ್-ಪೂರ್ವ ಮತ್ತು 4 ಮೆಟ್ರಿಕ್-ನಂತರದ ಹೀಗೆ ಒಟ್ಟು 14 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿರುತ್ತವೆ.<br><br>ಪ್ರಸ್ತುತ, ಕುಷ್ಟಗಿ ತಾಲ್ಲೂಕಿನಲ್ಲಿ 6 ಮೆಟ್ರಿಕ್ ಪೂರ್ವ ಹಾಗೂ 1 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಮಂಜೂರಾತಿಗೆ ಬೇಡಿಕೆ ಇದ್ದು, ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿ ಮಾರ್ಗಸೂಚಿಯನ್ವಯ ಪ್ರಸ್ತಾವನೆಗಳು ಜಿಲ್ಲೆಯಿಂದ ಸ್ವೀಕೃತವಾಗಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಯಾವ ಸ್ಥಳಗಳಲ್ಲಿ (ಗ್ರಾಮಗಳಲ್ಲಿ) ಈ ವಸತಿನಿಲಯಗಳನ್ನು ಪ್ರಾರಂಭಿಸಲಾಗುವುದು; ಪ್ರಾರಂಭಿಸಲಾಗುವ ವಸತಿನಿಲಯಗಳ ಸಂಖ್ಯೆ ಎಷ್ಟು; | ಕುಷ್ಟಗಿ ತಾಲ್ಲೂಕಿನಲ್ಲಿ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಮಂಜೂರಾತಿಗಾಗಿ ಈ ಕೆಳಕಂಡ ಸ್ಥಳಗಳಲ್ಲಿ ಬೇಡಿಕೆ ಇರುತ್ತದೆ.<br><br>1. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಶಿರಗುಂಪಿ<br>2. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಮೆಣದಾಳ<br>3. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಸಂಗನಾಳ<br>4. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಮನ್ನೆರಾಳ<br>5. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಜುಮಲಾಪೂರ<br>6. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಲಿಂಗದಹಳ್ಳಿ<br>7. ಮೆಟ್ರಿಕ್ ನಂತರದ ವೃತ್ತಿಪರ ಬಾಲಕರ ವಿದ್ಯಾರ್ಥಿನಿಲಯ, ಕುಷ್ಟಗಿ<br><br>ಆದರೆ ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯಾ ಆರ್ಥಿಕ ವರ್ಷದ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |
| ಇ) | ವಸತಿನಿಲಯಗಳಲ್ಲಿ ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಹೆಚ್ಚಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ; | ಸರ್ಕಾರದ ಆದೇಶ ಸಂಖ್ಯೆ ಹಿಂವಕ 352 ಬಿಎಂಎಸ್ 2019, ದಿನಾಂಕ 21.1.2020ರಲ್ಲಿ ರಾಜ್ಯದ ವಿವಿಧ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಸಂಖ್ಯಾಬಲ ಹೆಚ್ಚಳ ಮಾಡಲಾಗಿರುತ್ತದೆ, ಅದರಂತೆ, ಕುಷ್ಟಗಿ ತಾಲ್ಲೂಕಿನ 3 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಸಂಖ್ಯಾಬಲವನ್ನು ಹೆಚ್ಚಿಸಲಾಗಿದ್ದು, ವಿವರ ಕೆಳಕಂಡಂತಿದೆ. |

| ಕ್ರ. ಸಂ. | ವಿದ್ಯಾರ್ಥಿನಿಲಯದ ವಿವರ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚಳ ಮಾಡಿರುವ ಸಂಖ್ಯಾಬಲ |
|---|---|---|---|
| 1 | ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ, ಕುಷ್ಟಗಿ | 100 | 10 |
| 2 | ಮೆಟ್ರಿಕ್-ನಂತರದ ಬಾಲಕರ ವಿದ್ಯಾರ್ಥಿನಿಲಯ, ಕುಷ್ಟಗಿ | 100 | 10 |
| 3 | ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ, ಕುಷ್ಟಗಿ | 105 | 10 |
| | **ಒಟ್ಟು** | **305** | **30** |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2710 |
| ಸದಸ್ಯರ ಹೆಸರು | : | ಶ್ರೀ ಶಿವಣ್ಣ ಬಿ. (ಆನೇಕಲ್) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 22.03.2021 |

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ಪಟ್ಟಣದಲ್ಲಿ ಮಿನಿ ವಿಧಾನಸೌಧದ ನಿರ್ಮಾಣ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ಪೂರ್ಣ ವಿವರ ನೀಡುವುದು) | ಆನೇಕಲ್ ಪಟ್ಟಣದಲ್ಲಿ ಮಿನಿ ವಿಧಾನಸೌಧ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ.<br><br>ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರಿಂದ ಮಿನಿ ವಿಧಾನಸೌಧವನ್ನು ನಿರ್ಮಿಸಲು ಸವಿವರ ಅಂದಾಜು ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಲ್ಲಿ, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲಿಸಲಾಗುತ್ತದೆ. |
| ಆ) | ಇದ್ದಲ್ಲಿ, ಯಾವ ಕಾಲಮಿತಿಯೊಳಗೆ ಪ್ರಸ್ತಾವನೆಗೆ ಅನುಮೋದನೆ ನೀಡಿ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು? (ಮಾಹಿತಿ ನೀಡುವುದು) | |

ಕಂಇ 45 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಡಾ: ಅವಿನಾಶ್ ಉಮೇಶ್ ಜಾಧವ್ (ಚಿಂಚೋಳಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3163** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿ ಜಿಲ್ಲೆಯ ಚಿಂಚೋಳಿ ವಿಧಾನ ಸಭಾ ಮತ ಕ್ಷೇತ್ರ ವ್ಯಾಪ್ತಿಯಲ್ಲಿರುವ ಒಟ್ಟು ಕೊಳಗೇರಿ ಪ್ರದೇಶಗಳೆಷ್ಟು ; | ಕಲಬುರಗಿ ಜಿಲ್ಲೆಯ ಚಿಂಚೋಳಿ ವಿಧಾನ ಸಭಾ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಾಯಿದೆ ಪ್ರಕಾರ 21 ಘೋಷಿತ ಕೊಳಚೆ ಪ್ರದೇಶಗಳು ಇರುತ್ತವೆ. |
| (ಆ) | ಇಲ್ಲಿ ವಾಸ ಮಾಡುತ್ತಿರುವವರ ಸಂಖ್ಯೆ ಎಷ್ಟು ; ಕೊಳಗೇರಿ ಪ್ರದೇಶಗಳ ಅಭಿವೃದ್ಧಿಗಾಗಿ ಸರ್ಕಾರ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಬಿಡುಗಡೆ ಮಾಡಿರುವ ಹಾಗೂ ವೆಚ್ಚ ಮಾಡಿರುವ ಅನುದಾನವಷ್ಟು ; | ಚಿಂಚೋಳಿ ವಿಧಾನ ಸಭಾ ಮತ ಕ್ಷೇತ್ರವು ಒಟ್ಟು 14499 ಜನ ಸಂಖ್ಯೆ ಹೊಂದಿರುತ್ತದೆ. ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಬಿಡುಗಡೆ ಮಾಡಿರುವ ಹಾಗೂ ವೆಚ್ಚ ಮಾಡಿರುವ ಅನುದಾನದ ವಿವರ ಕೆಳಕಂಡಂತಿದೆ. (ರೂ.ಲಕ್ಷಗಳಲ್ಲಿ) |

| ವರ್ಷ | ಯೋಜನೆ ಹೆಸರು | ಕಾಮಗಾರಿ | ಬಿಡುಗಡೆ ಯಾದ ಅನುದಾನ | ವೆಚ್ಚ | ಷರಾ |
|---|---|---|---|---|---|
| 2017-18 | ಕೊಳಚೆ ಸುಧಾರಣೆ | ಅಭಿವೃದ್ಧಿ ಕಾಮಗಾರಿ | 50.00 | 50.00 | ಪೂರ್ಣಗೊಂಡಿದೆ |
| | ಪಿ.ಎಂ.ಎ.ವೈ | 250 ಮನೆಗಳು | 1367.50 | 378.25 | ಪ್ರಗತಿಯಲ್ಲಿದೆ |
| 2018-19 | ಕೊಳಚೆ ಸುಧಾರಣೆ | ಅಭಿವೃದ್ಧಿ ಕಾಮಗಾರಿ | 125.00 | 50.00 | ಪ್ರಗತಿಯಲ್ಲಿದೆ |
| | ಪಿ.ಎಂ.ಎ.ವೈ | 1263 ಮನೆಗಳು | 7207.66 | - | ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿದೆ |
| 2019-20 | ಕೊಳಚೆ ಸುಧಾರಣೆ | ಅಭಿವೃದ್ಧಿ ಕಾಮಗಾರಿ | 100.00 | 50.00 | ಪ್ರಗತಿಯಲ್ಲಿದೆ |
| 2020-21 | ಕೊಳಚೆ ಸುಧಾರಣೆ | ಅಭಿವೃದ್ಧಿ ಕಾಮಗಾರಿ | 100.00 | - | ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿದೆ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಇ) | ಈ ಜಿಲ್ಲೆಯನ್ನು ಕೊಳಗೇರಿ ಮುಕ್ತ ಮಾಡಲು ಸರ್ಕಾರ ರೂಪಿಸಿರುವ ಯೋಜನೆಗಳೇನು ? | ಕಲಬುರಗಿ ಜಿಲ್ಲೆಯನ್ನು ಕೊಳಗೇರಿ ಮುಕ್ತವನ್ನಾಗಿ ಮಾಡಲು ಪ್ರಧಾನ ಮಂತ್ರಿ ಆವಾಸ್ ಯೋಜನೆ ಮತ್ತು ರಾಜ್ಯ ಸರ್ಕಾರದ ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ ಮತ್ತು ವಾಜಪೇಯಿ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. |

ಸಂಖ್ಯೆ :ವಇ 52 ಎಸ್‌ಬಿಎಂ 2021

(ವಿ. ಸೋಮಣ್ಣ)
ವಸತಿ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3170
ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಾನಂದ.ಎಸ್. ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸುವ ದಿನಾಂಕ : 22/03/2021
ಉತ್ತರಿಸುವ ಸಚಿವರು : ಮಾನ್ಯ ಉಪಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ.

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಬಸವನ ಬಾಗೇವಾಡಿಯಲ್ಲಿ ಹೊಸ ಪ್ರವಾಸಿ ಮಂದಿರ ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ವಿಜಯಪುರ ಜಿಲ್ಲೆ ಬಸವನ ಬಾಗೇವಾಡಿ ಪಟ್ಟಣದಲ್ಲಿ ಪ್ರಸಕ್ತ ಸಾಲಿನಲ್ಲಿ ಹೊಸದಾಗಿ ಪ್ರವಾಸಿ ಮಂದಿರ ನಿರ್ಮಿಸುವ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಈ ಹೊಸ ಪ್ರವಾಸಿ ಮಂದಿರ ನಿರ್ಮಿಸುವುದಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಅನ್ವಯಿಸುವುದಿಲ್ಲ |
| ಇ) | ಹೊಸ ಪ್ರವಾಸಿ ಮಂದಿರವನ್ನು ಯಾವ ನಿರ್ದಿಷ್ಟ ಕಾಲಮಿತಿಯಲ್ಲಿ ನಿರ್ಮಿಸಲಾಗುವುದು; | |
| ಈ) | ಹೊಸ ಪ್ರವಾಸಿ ಮಂದಿರ ನಿರ್ಮಿಸುವುದಕ್ಕೆ ತಗಲುವ ವೆಚ್ಚ ಎಷ್ಟು? | |

ಸಂಖ್ಯೆ: ಲೋಇ 27 ಬಿಎಲ್‌ಕ್ಯೂ 2021

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3172 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ವಾಸವಾಗಿರುವ ಹಿಂದುಳಿದ ವರ್ಗ-2ಎಗೆ ಸೇರಿರುವ ದೇವಾಂಗ ಸಮುದಾಯದ ಅಭಿವೃದ್ಧಿಗಾಗಿ ದೇವಾಂಗ ಅಭಿವೃದ್ಧಿ ನಿಗಮ ಸ್ಥಾಪಿಸುವ ಪ್ರಸ್ತಾವನೆ ಸಲ್ಲಿಸಲಾಗಿದೆಯೇ; | ದೇವಾಂಗ ಅಭಿವೃದ್ಧಿ ನಿಗಮವನ್ನು ಸ್ಥಾಪಿಸುವ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆ ಸರ್ಕಾರದ ಯಾವ ಹಂತದಲ್ಲಿದೆ; | ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ) | ದೇವಾಂಗ ಅಭಿವೃದ್ಧಿ ನಿಗಮವನ್ನು ಸ್ಥಾಪಿಸುವುದಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಈ) | ದೇವಾಂಗ ಅಭಿವೃದ್ಧಿ ನಿಗಮವನ್ನು ಯಾವಾಗ ಸ್ಥಾಪಿಸಲಾಗುವುದು (ವಿವರ ನೀಡುವುದು) | |

**ಸಂಖ್ಯೆ:**ಹಿಂವಕ 87 ಬಿಸಿಎ 2021

(ಕೋಟಾ ಶ್ರೀನಿವಾಸ ಪೂಜಾರಿ)
ಮುಜರಾಯಿ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3188 |
| ಮಾನ್ಯ ಸದಸ್ಯರ ಹೆಸರು | ಶ್ರೀ ರೇವಣ್ಣ ಹೆಚ್.ಡಿ.(ಹೊಳೇನರಸೀಪುರ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹಾಸನ ತಾಲ್ಲೂಕು ಶಾಂತಿ ಗ್ರಾಮ ಹೋಬಳಿ ಮೊಸಳೆಹೊಸಳ್ಳಿ ಗ್ರಾಮದಲ್ಲಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು, ಸರ್ಕಾರಿ ಐ.ಟಿ.ಐ ಕಾಲೇಜು, ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಗ್ರಾಮೀಣ ಪ್ರದೇಶಗಳ ಹೆಣ್ಣುಮಕ್ಕಳು ವ್ಯಾಸಂಗ ಮಾಡುತ್ತಿದ್ದು, ಮೊಸಳೇಹೊಸಳ್ಳಿ ಗ್ರಾಮದಲ್ಲಿ ಬಾಲಕಿಯರ ಮೆಟ್ರಿಕ್-ನಂತರದ ವಸತಿನಿಲಯವಿಲ್ಲದಿರುವುದರಿಂದ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳ ವ್ಯಾಸಂಗಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ 1301 ಮೆಟ್ರಿಕ್ ಪೂರ್ವ ಹಾಗೂ 1137 ಮೆಟ್ರಿಕ್ ನಂತರದ ಹೀಗೆ ಒಟ್ಟು 2438 ಸರ್ಕಾರಿ ವಿದ್ಯಾರ್ಥಿನಿಲಯಗಳು ಕಾರ್ಯ ನಿರ್ವಹಿಸುತ್ತಿದ್ದು, ಒಟ್ಟು 192736 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶದ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ. ಹಾಸನ ಜಿಲ್ಲೆಯಲ್ಲಿ 66 ಮೆಟ್ರಿಕ್ ಪೂರ್ವ ಹಾಗೂ 50 ಮೆಟ್ರಿಕ್ ನಂತರದ ಒಟ್ಟು 116 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಕ್ರಮವಾಗಿ 3390 ಹಾಗೂ 5435 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶದ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ. |

| ಕ್ರ. ಸಂ | ವಿವರ | ವಿದ್ಯಾರ್ಥಿನಿಲಯಗಳ ಸಂಖ್ಯೆ | | | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆ | | |
|---|---|---|---|---|---|---|---|
| | | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| 1 | ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳು | 53 | 13 | 66 | 2665 | 725 | 3390 |
| 2 | ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು | 26 | 24 | 50 | 2755 | 2680 | 5435 |
| | ಒಟ್ಟು | **79** | **37** | **116** | **5420** | **3405** | **8825** |

ಪ್ರಸ್ತುತ ಹಾಸನ ಜಿಲ್ಲೆ, ಹಾಸನ ತಾಲ್ಲೂಕು ಮೊಸಳೆ ಹೊಸಹಳ್ಳಿ ಗ್ರಾಮದಲ್ಲಿ 100 ಸಂಖ್ಯಾಬಲದ ಒಂದು ಮೆಟ್ರಿಕ್ ನಂತರದ ಬಾಲಕರ ಹಾಗೂ 50 ಸಂಖ್ಯಾಬಲದ ಒಂದು ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯ ಕಾರ್ಯನಿರ್ವಹಿಸುತ್ತಿರುತ್ತದೆ.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಹಾಗಿದ್ದಲ್ಲಿ, ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳ ವ್ಯಾಸಂಗದ ಹಿತದೃಷ್ಟಿಯಿಂದ ಮೊಸಳೆಹೊಸಳ್ಳಿ ಗ್ರಾಮದಲ್ಲಿ ಇಲಾಖೆ ವತಿಯಿಂದ ಹೊಸದಾಗಿ ಬಾಲಕಿಯರ ಮೆಟ್ರಿಕ್-ನಂತರದ ವಸತಿನಿಲಯವನ್ನು ಸ್ಥಾಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಮೊಸಳೆಹೊಸಳ್ಳಿ ಗ್ರಾಮಕ್ಕೆ 100 ಸಂಖ್ಯಾಬಲದ ಒಂದು ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ ಮಂಜೂರಾತಿಗೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿ, ಆರ್ಥಿಕ ಇಲಾಖೆಯು ಅನುದಾನ ಲಭ್ಯತೆಯಿದ್ದಲ್ಲಿ ಮಾತ್ರ ಪ್ರಸ್ತಾವನೆ ಸಲ್ಲಿಸುವಂತೆ ಅಭಿಪ್ರಾಯಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಅನುದಾನ ಕೊರತೆಯಿರುವುದರಿಂದ ವಿದ್ಯಾರ್ಥಿನಿಲಯವನ್ನು ಮಂಜೂರು ಮಾಡಿರುವುದಿಲ್ಲ. ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ.<br><br>ಮುಂದುವರೆದು, ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಅರ್ಜಿ ಸಲ್ಲಿಸಿ ಪ್ರವೇಶ ದೊರಕದ ಅರ್ಹ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪರ್ಯಾಯವಾಗಿ ಅನುದಾನದ ಲಭ್ಯತೆಯನುಸಾರ ವಿದ್ಯಾಸಿರಿ ಯೋಜನೆಯಡಿ ಪ್ರತಿ ಮಾಹೆ ರೂ.1500/- ರಂತೆ ಗರಿಷ್ಠ 10 ತಿಂಗಳಿಗೆ ರೂ.15,000/- ಗಳನ್ನು ಮಂಜೂರು ಮಾಡಲಾಗುತ್ತದೆ. |

ಸಂಖ್ಯೆ:ಹಿಂವಕ 218 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3201 |
| ಸದಸ್ಯರ ಹೆಸರು | : | ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 22.03.2021 |

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯ ಮಾನ್ವಿ ವಿಧಾನಸಭಾ ಕ್ಷೇತ್ರದ ಮಾನ್ವಿ ತಾಲ್ಲೂಕಿಗೆ ಮಿನಿ ವಿಧಾನಸೌಧವನ್ನು ಯಾವಾಗ ಮಂಜೂರು ಮಾಡಲಾಗಿದೆ; ಇದರ ನಿರ್ಮಾಣಕ್ಕಾಗಿ ಅನುದಾನ ಮಂಜೂರು ಮಾಡಲಾಗಿದೆಯೇ; | ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲು ಮಾನವಿ ಸೀಮಾದ ಸರ್ವೆ ನಂ.456 ಮತ್ತು 463 ರಲ್ಲಿ ಒಟ್ಟು 7-28 ಗುಂಟೆ ಜಮೀನನ್ನು ಕಾಯ್ದಿರಿಸಲಾಗಿದೆ.<br><br>ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರಿಂದ ಮಿನಿ ವಿಧಾನಸೌಧವನ್ನು ರೂ.10.00 ಕೋಟಿಗಳ ವೆಚ್ಚದಲ್ಲಿ ನಿರ್ಮಿಸಲು ಸವಿವರ ಅಂದಾಜು ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಲ್ಲಿ, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲಿಸಲಾಗುತ್ತದೆ. |
| ಆ) | ಮಿನಿ ವಿಧಾನಸೌಧ ನಿರ್ಮಾಣ ಕಾಮಗಾರಿ ಯಾವ ಹಂತದಲ್ಲಿದೆ; ಈವರೆಗೆ ವೆಚ್ಚ ಮಾಡಿರುವ ಹಣ ಎಷ್ಟು; | |
| ಇ) | ಮಿನಿ ವಿಧಾನಸೌಧ ಕಾಮಗಾರಿ ಈವರೆಗೆ ಪ್ರಾರಂಭವಾಗದಿರಲು ಕಾರಣಗಳೇನು; ಯಾವಾಗ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು; | |
| ಈ) | ಮಿನಿ ವಿಧಾನಸೌಧ ನಿರ್ಮಾಣಕ್ಕಾಗಿ ಜಾಗ ಗುರುತಿಸಲಾಗಿದೆಯೇ; ಕಾಮಗಾರಿಗೆ ಅಗತ್ಯ ಇರುವ ಹಣವನ್ನು ಯಾವಾಗ ಬಿಡುಗಡೆ ಮಾಡಲಾಗುವುದು? | |

**ಕಂಇ 43 ಡಬ್ಲ್ಯೂಬಿಆರ್ 2021**

**(ಆರ್. ಅಶೋಕ)**
ಕಂದಾಯ ಸಚಿವರು.

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3212 |
| ಸದಸ್ಯರ ಹೆಸರು | ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಂದಾಯ ಇಲಾಖೆಯಲ್ಲಿ ಕಿರಿಯ ಸಹಾಯಕ, ಡಾಟಾ ಎಂಟ್ರಿ ಆಪರೇಟರ್, ಗ್ರೂಪ್–ಡಿ ಹಾಗು ಇತರೆ ಹುದ್ದೆಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ | ಇದರಿಂದಾಗಿ ಪಹಣಿ , ಖಾತಾ, ರಶೀದಿಗಳನ್ನು ಪಡೆಯಲು ಮತ್ತು ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪಹಣಿ, ಖಾತಾ, ರಶೀದಿಗಳನ್ನು ಪಡೆಯಲು ಮತ್ತು ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ಯಾವುದೇ ವಿಳಂಬವಾಗಿರುವುದಿಲ್ಲ. |
| ಇ | ಹೊರಗುತ್ತಿಗೆ ಆಧಾರದ ಮೇಲೆ ಕಿರಿಯ ಸಹಾಯಕ. ಡಾಟಾ ಎಂಟ್ರಿ ಆಪರೇಟರ್, ಗ್ರೂಪ್–ಡಿ ಹಾಗೂ ಇತರೆ ಹುದ್ದೆಗಳ ನೇಮಕ ಮಾಡಿಕೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಆರ್ಥಿಕ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ:ಆಇ 6 ಟಿ.ಎಫ್.ಪಿ 2018, ಬೆಂಗಳೂರು ದಿನಾಂಕ:22–03–2019ರನ್ವಯ ಮಂಜೂರಾದ ಹುದ್ದೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆದುರಾಗಿ ಗ್ರೂಪ್–ಡಿ, ಡಾಟಾ ಎಂಟ್ರಿ ಆಪರೇಟರ್/ಬೆರಳಚ್ಚುಗಾರರು, ವಾಹನ ಚಾಲಕರನ್ನು ಮಾತ್ರ ಹೊರಗುತ್ತಿಗೆ ಮೇಲೆ ನೇಮಕ ಮಾಡಿಕೊಳ್ಳಲು ಪ್ರಸ್ತಾವನೆ ಸಲ್ಲಿಸಿದಂತಹ ಪ್ರಾದೇಶಿಕ ಆಯುಕ್ತರಿಗೆ ಮತ್ತು ಜಿಲ್ಲಾಧಿಕಾರಿಗಳಿಗೆ ಆರ್ಥಿಕ ಇಲಾಖೆಯ ದಿನಾಂಕ:22.03.2019ರ ಆದೇಶದಲ್ಲಿ ಸೂಚಿಸಿರುವ ಷರತ್ತಿನಂತೆ ನಿಯಮಾನುಸಾರ ಕ್ರಮವಹಿಸುವಂತೆ ನಿರ್ದೇಶನ ನೀಡಲಾಗಿದ್ದು, ಕೆಲವು ಪ್ರಕರಣಗಳನ್ನು ಆರ್ಥಿಕ ಇಲಾಖೆಯ ಸಹಮತಿಗೆ ಕಳುಹಿಸಲಾಗುತ್ತಿದೆ. |
| ಈ | ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಇರುವ ತೊಡಕುಗಳೇನು; | ಮಂಜೂರಾದ ಹುದ್ದೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆದುರಾಗಿ ಹೊರಗುತ್ತಿಗೆ ಮೇಲೆ ನೇಮಿಸಿಕೊಳ್ಳಲು ಯಾವುದೇ ತೊಡಕುಗಳು ಇರುವುದಿಲ್ಲ. |
| ಉ | ಹಾಗಿದ್ದಲ್ಲಿ ಕಂದಾಯ ಇಲಾಖೆಯಲ್ಲಿ ಕಿರಿಯ ಸಹಾಯಕ, ಡಾಟಾ ಎಂಟ್ರಿ ಆಪರೇಟರ್, ಗ್ರೂಪ್–ಡಿ ಹಾಗೂ ಇತರೆ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರ ಕೈಗೊಂಡ ಕ್ರಮಗಳೇನು? (ಪೂರ್ಣ ವಿವರ ಒದಗಿಸುವುದು) | ಉದ್ಭವಿಸುವುದಿಲ್ಲ |

**ಇ–ಕಂಇ 33 ಎಂವಿಎಸ್ 2021**

**(ಆರ್.ಅಶೋಕ)**
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3217**
**ಮಾನ್ಯ ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್ (ಪುತ್ತೂರು)**
**ಉತ್ತರಿಸುವ ದಿನಾಂಕ : 22-03-2021**
**ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು (ಲೋಇ)**

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರಿನಲ್ಲಿದ್ದ ಲೋಕೋಪಯೋಗಿ ಇಲಾಖೆಯ ಚೀಫ್ ಇಂಜಿನಿಯರ್ ಕಛೇರಿಯನ್ನು ಶಿವಮೊಗ್ಗಕ್ಕೆ ಸ್ಥಳಾಂತರ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಈ ಕಛೇರಿಯನ್ನು ಶಿವಮೊಗ್ಗಕ್ಕೆ ಸ್ಥಳಾಂತರ ಮಾಡಿರುವುದರಿಂದ ದಕ್ಷಣ ಕನ್ನಡ ಜಿಲ್ಲೆಗೆ ತೊಂದರೆಯಾಗುತ್ತಿರುವುದರಿಂದ ಪುನಃ ಸದರಿ ಕಛೇರಿಯನ್ನು ಬೆಂಗಳೂರಿಗೆ ಸ್ಥಳಾಂತರಿಸಲು ಸರ್ಕಾರ ಯಾವಾಗ ಕ್ರಮ ಕೈಗೊಳ್ಳುವುದು? | ಬೆಂಗಳೂರಿನಲ್ಲಿದ್ದ ಲೋಕೋಪಯೋಗಿ ಇಲಾಖೆಯ ಯಾವುದೇ ಮುಖ್ಯ ಇಂಜಿನಿಯರ್ ಕಛೇರಿಯನ್ನು ಶಿವಮೊಗ್ಗಕ್ಕೆ ಸ್ಥಳಾಂತರಿಸಿರುವುದಿಲ್ಲ, ಬದಲಾಗಿ ಶಿವಮೊಗ್ಗ ವೃತ್ತ ಹಾಗೂ ಮಂಗಳೂರು ವೃತ್ತದ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನದಲ್ಲಿ ತಾಂತ್ರಿಕ / ಆಡಳಿತಾತ್ಮಕ ಅನುಮೋದನೆಯನ್ನು ಶೀಘ್ರಗೊಳಿಸಲು ಹಾಗೂ ಕಾಮಗಾರಿಗಳನ್ನು ಸುಗಮವಾಗಿ ಅನುಷ್ಠಾನಗೊಳಿಸುವ ಹಿತದೃಷ್ಠಿಯಿಂದ ಬೆಂಗಳೂರು ರೈಲ್ ಲಿಂಕ್ ಲಿಮಿಟೆಡ್‌ನಲ್ಲಿ ರದ್ದುಪಡಿಸಿರುವ ಮುಖ್ಯ ಇಂಜಿನಿಯರ್ ಹುದ್ದೆಯನ್ನು ಪುನರ್ ಸ್ಥಾಪಿಸಿ ಲೋಕೋಪಯೋಗಿ ಇಲಾಖೆಗೆ ಹಸ್ತಾಂತಿರಿಸಿರುವ ಮುಖ್ಯ ಇಂಜಿನಿಯರ್ ಹುದ್ದೆಯನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು ಕೇಂದ್ರ ವಲಯ, ಶಿವಮೊಗ್ಗ ಎಂದು ಹೊಸದಾಗಿ ನಾಮಾಂಕಿತಗೊಳಿಸಿ ಸಂಖ್ಯೆ: ಲೋಇ 238 ಸೇಸಎ 2020 ದಿನಾಂಕ:04-05-2020 ರಂದು ಸರ್ಕಾರದ ಆದೇಶ ಹೊರಡಿಸಲಾಗಿದೆ. ಆದ್ದರಿಂದ ಬೆಂಗಳೂರಿಗೆ ಸ್ಥಳಾಂತರಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

**ಸಂಖ್ಯೆ: ಲೋಇ 16 ಸೇಸಎ 2021**

(ಗೋವಿಂದ ಎಂ ಕಾರಜೋಳ)
ಉಪ ಮುಖ್ಯಮಂತ್ರಿಗಳು
(ಲೋಕೋಪಯೋಗಿ ಇಲಾಖೆ)

# ಕರ್ನಾಟಕ ವಿಧಾನಸಭೆ
## 15ನೇ ವಿಧಾನಸಭೆ
## 9ನೇ ಅಧಿವೇಶನ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3235
ಮಾನ್ಯ ಸದಸ್ಯರ ಹೆಸರು : ಶ್ರೀ.ರಂಗನಾಥ್ ಹೆಚ್.ಡಿ. ಡಾ॥ (ಕುಣಿಗಲ್)
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಇಲಾಖೆ)

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಇರುವ ಮಾನದಂಡಗಳೇನು; | ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರವು ಆದೇಶ ಸಂಖ್ಯೆ:ಲೋಇ:615:ಸಿಆರ್‌ಎಂ:2010 ಬೆಂಗಳೂರು ದಿನಾಂಕ 21-04-2010 ರಲ್ಲಿ ಮಾನದಂಡಗಳನ್ನು ನಿಗದಿಪಡಿಸಿದ್ದು, ಆದೇಶದ ಪ್ರತಿಯನ್ನು ಲಗತ್ತಿಸಿದೆ. |
| ಆ) | ರಾಜ್ಯದ ಯಾವುದಾದರೂ ವಿಧಾನ ಸಭಾ ಕ್ಷೇತ್ರದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಸರ್ಕಾರದ ಆದೇಶ ಸಂಖ್ಯೆ.ಲೋಇ:85:ಇಎಪಿ:2020 ರನ್ವಯ ರಾಜ್ಯದ 30 ಜಿಲ್ಲೆಗಳ 183 ತಾಲ್ಲೂಕುಗಳಲ್ಲಿನ 15,510 ಕಿಮೀ ಉದ್ದದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ. |

ಸಂಖ್ಯೆ. ಲೋಇ E-116 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3238
2) ಸದಸ್ಯರ ಹೆಸರು ಶ್ರೀ ದಿನಕರ್ ಕೇಶವ್ ಶೆಟ್ಟಿ (ಕುಮಟ)
3) ಉತ್ತರಿಸಬೇಕಾದ ದಿನಾಂಕ 22-03-2021
4) ಉತ್ತರಿಸಬೇಕಾದ ಸಚಿವರು ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ರೈತರು ಉಪಯೋಗಿಸುವ ಕೃಷಿ ಉಪಕರಣಗಳಿಗೆ ತೆರಿಗೆ ವಿನಾಯಿತಿ ಅಥವಾ ಕನಿಷ್ಠ ಶೇಕಡ 5 ರಷ್ಟು ಜಿ.ಎಸ್.ಟಿ. ವಿಧಿಸುತ್ತಿದ್ದು, ಮೀನುಗಾರಿಕೆಯೂ ಕೃಷಿಯೇ ಆಗಿರುವುದರಿಂದ ಮೀನುಗಾರಿಕೆಗೆ ಈಗಾಗಲೇ ಶೇಕಡ 28 ರಷ್ಟು ಜಿ.ಎಸ್.ಟಿ. ನಿಗದಿಪಡಿಸಿರುವುದು ಸರ್ಕಾರ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಮೀನುಗಾರರು ಪ್ರಮುಖವಾಗಿ ನಾಡದೋಣಿ ಉಪಯೋಗಿಸುವ ಯಂತ್ರಗಳಿಗೆ ಶೇಕಡ 5 ರಂತೆ ತೆರಿಗೆ ನಿಗದಿಪಡಿಸುವ ಉದ್ದೇಶ ಸರ್ಕಾರಕ್ಕಿದೆಯೇ; ಇದ್ದಲ್ಲಿ ಈ ಬಗ್ಗೆ ಯಾವಾಗ ಕ್ರಮಕೈಗೊಳ್ಳಲಾಗುವುದು; (ವಿವರ ನೀಡುವುದು) | ಬಂದಿದೆ. ನಾಡದೋಣಿಗಳು ಉಪಯೋಗಿಸುವ ಯಂತ್ರಗಳಿಗೆ / ಉಪಕರಣಗಳಿಗೆ ಶೇಕಡ 5 ರಂತೆ ತೆರಿಗೆ ನಿಗದಿಪಡಿಸುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |
| ಆ) | ನಾಡದೋಣಿ ಮೀನುಗಾರರು ಮೀನುಗಾರಿಕೆಗೆ ಹೋದಾಗ ಆಗುವಂತಹ ಅವಗಡಗಳನ್ನು ತಪ್ಪಿಸಲು ದೋಣಿಗಳಿಗೆ ಜಿ.ಪಿ.ಎಸ್. ಅಳವಡಿಸುವ ಉದ್ದೇಶ ಸರ್ಕಾರಕ್ಕಿದೆಯೇ; | ಪ್ರಸ್ತುತ ಇಂತಹ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಇ) | ನಾಡದೋಣಿ ಮೀನುಗಾರರಿಗೆ ಸರಿಯಾಗಿ ಸೀಮೆಎಣ್ಣೆ ದೊರೆಯದೇ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಗೋವಾ ಮಾದರಿಯಲ್ಲಿ ಪೆಟ್ರೋಲ್ ಇಂಜಿನ್ ಗೆ ಸಹಾಯಧನ ಅಥವಾ ಪೆಟ್ರೋಲ್ ಪಡೆಯಲು ಸಹಾಯಧನ ಅಥವಾ ಪರ್ಯಾಯ ವ್ಯವಸ್ಥೆ ಕಲ್ಪಿಸುವ ಉದ್ದೇಶವಿದೆಯೇ; (ವಿವರ ನೀಡುವುದು) | ಬಂದಿದೆ. ಗೋವಾ ಮಾದರಿಯಲ್ಲಿ ಪೆಟ್ರೋಲ್ ಇಂಜಿನ್ ಗೆ ಸಹಾಯಧನ ಅಥವಾ ಪೆಟ್ರೋಲ್ ಪಡೆಯಲು ಸಹಾಯಧನ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಈ) | ಕೇರಳ ಮಾದರಿಯಲ್ಲಿ ಕರ್ನಾಟಕ ಕರಾವಳಿಯಲ್ಲಿ ಸೀ-ಅಂಬ್ಯುಲೆನ್ಸ್ ಸೇವೆ ಜಾರಿಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ಇದ್ದಲ್ಲಿ ವಿವರ ನೀಡುವುದು) | ಪ್ರಸ್ತುತ ಇಂತಹ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

**ಸಂಖ್ಯೆ: ಪಸಂಮೀ ಇ-110 ಮೀಇಯೋ 2021**

(ಎಸ್. ಅಂಗಾರ)
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3239
ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ತಾಲ್ಲೂಕಿಗೆ ತಾಲ್ಲೂಕು ಮಟ್ಟದ ಸಮಾಜ ಕಲ್ಯಾಣ ಇಲಾಖೆ ಕಛೇರಿ ಆರಂಭಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | 2012-13ನೇ ಸಾಲಿನಲ್ಲಿ ರಚನೆಯಾದ ಕಿತ್ತೂರು ತಾಲ್ಲೂಕು ಸೇರಿದಂತೆ ಹೊಸದಾಗಿ ರಚನೆಯಾದ ತಾಲ್ಲೂಕುಗಳಿಗೆ ಇಲಾಖಾ ಮಟ್ಟದ ಕಛೇರಿಗಳನ್ನು ಪ್ರಾರಂಭಿಸುವ ಕುರಿತು ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಹಮತಿಗಾಗಿ ಕಳುಹಿಸಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ:19-08-2019 ರಲ್ಲಿ ಪ್ರಸ್ತುತ ಪರಿಸ್ಥಿತಿಯಲ್ಲಿ ಯಾವುದೇ ಹೆಚ್ಚುವರಿ ಅನುದಾನ ನೀಡಲು ಸಾಧ್ಯವಿಲ್ಲವಾದ ಕಾರಣ ಪ್ರಸ್ತಾವನೆಯನ್ನು ಎರಡು ವರ್ಷ ಮುಂದೂಡುವಂತೆ ತಿಳಿಸಿರುತ್ತದೆ. ಆದುದರಿಂದ, ರಾಜ್ಯದ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಮುಂದೆ ಪರಿಶೀಲಿಸಲಾಗುವುದು. |
| ಆ) | ಹಾಗಿದ್ದಲ್ಲಿ, 2021-22 ನೇ ಸಾಲಿನಲ್ಲಿ ಈ ಕಛೇರಿ ಆರಂಭಿಸಲು ಸರ್ಕಾರದ ಕ್ರಮವೇನು? | |

ಸಕಇ 129 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3240 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸುವ ದಿನಾಂಕ | : | 22/03/2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ. |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಗೃಹ ಇಲಾಖೆ ವಶದಲ್ಲಿದ್ದ ಎಂ.ಕೆ.ಹುಬ್ಬಳ್ಳಿ ನಿರೀಕ್ಷಣಾ ಮಂದಿರ (ಐಬಿ) ವನ್ನು ಲೋಕೋಪಯೋಗಿ ಇಲಾಖೆಗೆ ಮರಳಿ ನೀಡಲು ಆದೇಶಿಸಿರುವುದು ಸರ್ಕಾರದ ಗಮನದಲ್ಲಿಯೇ; ಹಾಗಿದ್ದಲ್ಲಿ, ಯಾವ ಹಂತದಲ್ಲಿದೆ; | ಗೃಹ ಇಲಾಖೆಯ ವಶದಲ್ಲಿರುವ ಎಂ.ಕೆ ಹುಬ್ಬಳ್ಳಿ ನಿರೀಕ್ಷಣಾ ಮಂದಿರವನ್ನು ಲೋಕೋಪಯೋಗಿ ಇಲಾಖೆಗೆ ಮರಳಿ ಪಡೆಯಲು ಸರ್ಕಾರದ ಪತ್ರ ಸಂಖ್ಯೆ: ಲೋಇ 07 ಬಿಟಿಐ 2019:ದಿನಾಂಕ:31/12/2019ರಲ್ಲಿ ಅನುಮತಿ ನೀಡಲಾಗಿದೆ.<br><br>ಹಾಲಿ ಗೃಹ ಇಲಾಖೆಯ ಅಧೀನದಲ್ಲಿರುವ ನಿರೀಕ್ಷಣಾ ಮಂದಿರವನ್ನು ಮರಳಿ ಲೋಕೋಪಯೋಗಿ ಇಲಾಖೆಯ ವಶಕ್ಕೆ ಪಡೆಯುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |
| ಆ) | ಲೋಕೋಪಯೋಗಿ ಇಲಾಖೆಯವರು ಗೃಹ ಇಲಾಖೆಯಿಂದ ಸದರಿ ನಿರೀಕ್ಷಣಾ ಮಂದಿರವನ್ನು ಮರಳಿ ಪಡೆದಿದ್ದಾರೆಯೇ; | |
| ಇ) | ಪಡೆದಿದ್ದಲ್ಲಿ, ಈ ನಿರೀಕ್ಷಣಾ ಮಂದಿರದ (ಐಬಿ) ಮರು ನವೀಕರಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮವೇನು? | ಗೃಹ ಇಲಾಖೆಯ ವತಿಯಿಂದ ನಿರೀಕ್ಷಣಾ ಮಂದಿರವನ್ನು ಲೋಕೋಪಯೋಗಿ ಇಲಾಖೆಯ ವಶಕ್ಕೆ ಪಡೆದ ನಂತರ ನಿರೀಕ್ಷಣಾ ಮಂದಿರದ ಮರು ನವೀಕರಣದ ಕುರಿತು ಪರಿಶೀಲಿಸಲಾಗುವುದು. |

**ಸಂಖ್ಯೆ: ಲೋಇ 26 ಬಿಎಲ್‌ಕ್ಯೂ 2021**

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3241 |
| ಮಾನ್ಯ ಸದಸ್ಯರ ಹೆಸರು | ಶ್ರೀ ದೊಡ್ಡನಗೌಡ ಮಹಾಂತೇಶ್ ಬಸವಂತರಾಯ |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೇವರಾಜ ಅರಸು ನಿಗಮದಿಂದ ಹಿಂದುಳಿದ ವರ್ಗಗಳ ಬಡ ಜನರಿಗೆ ನೀಡುತ್ತಿದ್ದ ಸರ್ಕಾರದ ವಿವಿಧ ಯೋಜನೆಗಳನ್ನು 2020-21ನೇ ಸಾಲಿನಲ್ಲಿ ತಡೆಹಿಡಿದಿರಲು ಕಾರಣವೇನು; | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ 2020-21ನೇ ಸಾಲಿನ ಆಯವ್ಯಯದಲ್ಲಿ ರೂ.80.00ಕೋಟಿಗಳ ಅನುದಾನ ಒದಗಿಸಲಾಗಿದೆ. ಈ ಮೊತ್ತದಲ್ಲಿ ಅರಿವು-ಶೈಕ್ಷಣಿಕ ಸಾಲ ಯೋಜನೆಯ ಸೌಲಭ್ಯ ಪಡೆದ ನವೀಕರಣ ವಿದ್ಯಾರ್ಥಿಗಳಿಗೆ ಮುಂದುವರೆದ ಕಂತಿನ ಮೊತ್ತ ಪಾವತಿಸಲು ರೂ.17.50 ಕೋಟಿಗಳನ್ನು ಹಂಚಿಕೆ ಮಾಡಿಕೊಳ್ಳಲಾಗಿದೆ.<br><br>2019-20ನೇ ಸಾಲಿಗೆ ಗಂಗಾ ಕಲ್ಯಾಣ ನೀರಾವರಿ ಯೋಜನೆಗೆ ರೂ.95.00 ಕೋಟಿಗಳನ್ನು ಹಂಚಿಕೆ ಮಾಡಿಕೊಳ್ಳಲಾಗಿದ್ದು, ರೂ.60.00 ಕೋಟಿಗಳ ಅನುದಾನವನ್ನು ಕಡಿತಗೊಳಿಸಿದ್ದರಿಂದ 2020-21ನೇ ಸಾಲಿನಲ್ಲಿ ಒದಗಿಸಲಾದ ಅನುದಾನದಲ್ಲಿ ರೂ.60.00 ಕೋಟಿಗಳನ್ನು 2019-20ನೇ ಸಾಲಿನ ಗಂಗಾ ಕಲ್ಯಾಣ ಯೋಜನೆಗೆ ಬಳಸಿಕೊಳ್ಳಲಾಗಿದೆ. ಹಾಗೂ ರೂ.2.50 ಕೋಟಿಗಳನ್ನು ಆಯವ್ಯಯ ಭಾಷಣದಲ್ಲಿ ಘೋಷಿಸಿರುವ ಕಾರ್ಯಕ್ರಮಕ್ಕಾಗಿ ರೂ.2.50 ಕೋಟಿಗಳನ್ನು ಹಂಚಿಕೆ ಮಾಡಿಕೊಂಡು ಅನುಷ್ಠಾನಗೊಳಿಸಲಾಗಿದೆ.<br><br>2020-21ನೇ ಸಾಲಿಗೆ ಕೋವಿಡ್ -19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಕ್ಲಿಷ್ಟಕರ ಆರ್ಥಿಕ ಪರಿಸ್ಥಿತಿಯಲ್ಲಿ ಈ ಕೆಳಕಂಡ ಯೋಜನೆಗಳ ಅನುಷ್ಠಾನಕ್ಕೆ ಅನುದಾನ ಲಭ್ಯವಾಗದ ಕಾರಣ ತಡೆಹಿಡಿಯಲಾಗಿದೆ.<br>1. ಸ್ವಯಂ ಉದ್ಯೋಗ ಸಾಲ ಯೋಜನೆ.<br>2. ಗಂಗಾ ಕಲ್ಯಾಣ ನೀರಾವರಿ ಯೋಜನೆ.<br>3. ಸಾಂಪ್ರದಾಯಿಕ ವೃತ್ತಿದಾರರ ಸಾಲ ಯೋಜನೆ.<br>4. ಅರಿವು-ಶೈಕ್ಷಣಿಕ ಸಾಲ ಯೋಜನೆ (ಹೊಸದಾಗಿ)<br>5. ಕಿರು ಸಾಲ ಯೋಜನೆ. |
| ಆ) | 2020-21ನೇ ಸಾಲಿನಲ್ಲಿ ಬೇರೆ ಬೇರೆ ನಿಗಮಗಳಲ್ಲಿ ಈ ಯೋಜನೆಗಳಿಗೆ ಫಲಾನುಭವಿಗಳನ್ನು ಆಯ್ಕೆ ಮಾಡಲು ಶಾಸಕರಿಗೆ ಗುರಿ ನಿಗದಿಪಡಿಸಿ ಫಲಾನುಭವಿಗಳ ಆಯ್ಕೆ ಪಟ್ಟಿ ಕೇಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಇ) | ಬಂದಿದ್ದಲ್ಲಿ, ದೇವರಾಜ ಅರಸು ನಿಗಮದಿಂದ 2021-22ನೇ ಸಾಲಿನಲ್ಲಿ ಶಾಸಕರಿಗೆ ಹೆಚ್ಚಿನ ಗುರಿ ನಿಗದಿಪಡಿಸಲು ಸರ್ಕಾರದ ಕ್ರಮವೇನು? | ಉದ್ಭವಿಸುವುದಿಲ್ಲ. |

ಸಂಖ್ಯೆ:ಹಿಂವಕ 219 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3242** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 2016-17 ರಿಂದ 2017-18 ನೇ ಸಾಲಿನವರೆಗೆ ವಿವಿಧ ವಸತಿ ಯೋಜನೆಯಡಿ ಕಿತ್ತೂರು ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ಬೈಲಹೊಂಗಲ ಮತ್ತು ಕಿತ್ತೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಎಷ್ಟು ಮನೆಗಳನ್ನು ಹಂಚಿಕೆ ಮಾಡಲಾಗಿದೆ ; (ಯೋಜನೆಗಳವಾರು ಗ್ರಾಮ ಪಂಚಾಯಿತಿ ಹೆಸರು, ಫಲಾನುಭವಿಗಳ ಹೆಸರು ಸಹಿತ ವಿವರ ನೀಡುವುದು) | 2016-17 ರಿಂದ 2017-18 ನೇ ಸಾಲಿನ ವರೆಗೆ ವಿವಿಧ ವಸತಿ ಯೋಜನೆಯಡಿ ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಬೈಲಹೊಂಗಲ 3300 ಮತ್ತು ಕಿತ್ತೂರು ತಾಲ್ಲೂಕಿನಲ್ಲಿ 2723 ಮನೆಗಳು ಹಂಚಿಕೆಯಾಗಿದ್ದು, ವಿವರ ಕೆಳಕಂಡಂತಿದೆ. |

ಬೈಲಹೊಂಗಲ ತಾಲ್ಲೂಕು:-

| ಯೋಜನೆ | ಹಂಚಿಕೆಯಾದ ಮನೆ |
|---|---|
| ಬಸವ ವಸತಿ ಯೋಜನೆ | 1835 |
| ದೇವರಾಜು ಅರಸು ವಸತಿ ಯೋಜನೆ (ಗ್ರಾಮೀಣ) | 81 |
| ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ) | 846 |
| ಪ್ರಧಾನ ಮಂತ್ರಿ ಅವಾಸ್ ಯೋಜನೆ (ಗ್ರಾಮೀಣ) | 538 |
| **ಒಟ್ಟು** | 3300 |

ಕಿತ್ತೂರು ತಾಲ್ಲೂಕು:

| ಯೋಜನೆ | ಹಂಚಿಕೆಯಾದ ಮನೆ |
|---|---|
| ಬಸವ ವಸತಿ ಯೋಜನೆ | 1417 |
| ದೇವರಾಜು ಅರಸು ವಸತಿ ಯೋಜನೆ (ಗ್ರಾಮೀಣ) | 129 |
| ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ) | 408 |
| ಪ್ರಧಾನ ಮಂತ್ರಿ ಅವಾಸ್ ಯೋಜನೆ (ಗ್ರಾಮೀಣ) | 421 |
| ಅಂಬೇಡ್ಕರ್ ನಿವಾಸ್ ಯೋಜನೆ (ನಗರ) | 23 |
| ವಾಜಪೇಯಿ ನಗರ ವಸತಿ ಯೋಜನೆ | 325 |
| **ಒಟ್ಟು** | 2723 |

ಫಲಾನುಭವಿಗಳ ಹೆಸರುಗಳೊಂದಿಗೆ ಗ್ರಾಮ ಪಂಚಾಯಿತಿವಾರು ವಿವರವನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3243 |
| ಸದಸ್ಯರ ಹೆಸರು | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಸಂಪಗಾಂವ ಗ್ರಾಮವನ್ನು ಹೋಬಳಿ ಕೇಂದ್ರವೆಂದು ಘೋಷಣೆ ಮಾಡುವ ಪ್ರಸ್ತಾವನೆ ಇರುವುದು ನಿಜವೇ; | ಕಿತ್ತೂರು ವಿಧಾನಸಭಾ ಕ್ಷೇತ್ರದ ಸಂಪಗಾಂವ ಗ್ರಾಮವನ್ನು ಹೋಬಳಿ ಕೇಂದ್ರವೆಂದು ಘೋಷಣೆ ಮಾಡುವ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಈ ಪ್ರಸ್ತಾವನೆ ಸರ್ಕಾರದ ಯಾವ ಹಂತದಲ್ಲಿದೆ; ಈ ಕುರಿತು ಸರ್ಕಾರದ ಕ್ರಮವೇನು? | |

**ಸಂಖ್ಯೆ: ಕಂಇ 54 ಎಸ್ಎಸ್ಸಿ 2021**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3254 |
| ಸದಸ್ಯರ ಹೆಸರು | : | ಶ್ರೀ.ನಿರಂಜನ್ ಕುಮಾರ್.ಸಿ.ಎಸ್ (ಗುಂಡ್ಲುಪೇಟೆ) |
| ಉತ್ತರಿಸುವ ದಿನಾಂಕ | : | 22.03.2021 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಗುಂಡ್ಲುಪೇಟೆ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ಹೊಸದಾಗಿ ಪಶು ಚಿಕಿತ್ಸಾ ಕೇಂದ್ರಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಪಶುಚಿಕಿತ್ಸಾ ಕೇಂದ್ರಗಳನ್ನು ಯಾವ ಯಾವ ಗ್ರಾಮಗಳಿಗೆ ಮತ್ತು ಯಾವಾಗ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಗುಂಡ್ಲುಪೇಟೆ ಕ್ಷೇತ್ರದ ವ್ಯಾಪ್ತಿಯಲ್ಲಿ ಬನ್ನಿತಾಳಪುರ, ಸೋಮಹಳ್ಳಿ ಹಾಗೂ ಕೊಡಸೋಗೆ ಗ್ರಾಮಗಳಿಗೆ ಹೊಸದಾಗಿ ಪಶುಚಿಕಿತ್ಸಾ ಕೇಂದ್ರಗಳನ್ನು ಮಂಜೂರು ಮಾಡಲು ಮನವಿ ಸ್ವೀಕೃತಗೊಂಡಿರುತ್ತದೆ.<br>ಆದರೆ, ಪ್ರಸ್ತುತ ಗುಂಡ್ಲುಪೇಟೆ ಸೇರಿದಂತೆ ರಾಜ್ಯದಲ್ಲಿ ಯಾವುದೇ ಹೊಸ ಪಶು ಆಸ್ಪತ್ರೆ/ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವ ಕಾರ್ಯಕ್ರಮ ಸರ್ಕಾರದ ಮುಂದಿರುವುದಿಲ್ಲ. |

ಸಂ: ಪಸಂಮೀ ಇ-42 ಪಸಸೇ 2021

(ಪ್ರಭು.ಬಿ.ಚವ್ಹಾಣ್)
ಪಶುಸಂಗೋಪನೆ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3258 |
| ಮಾನ್ಯ ಸದಸ್ಯರ ಹೆಸರು | ಶ್ರೀ ಯತೀಂದ್ರ ಸಿದ್ಧರಾಮಯ್ಯ ಡಾ\|\| (ವರುಣ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ಹಿಂದುಳಿದ ವರ್ಗಗಳ ಅನುಕೂಲಕ್ಕೆ ಎಷ್ಟು ಸಮುದಾಯ ಭವನಗಳನ್ನು ಮಂಜೂರು ಮಾಡಲಾಗಿದೆ; (ವರ್ಷವಾರು, ಜಿಲ್ಲಾವಾರು ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಮಂಜೂರು ಮಾಡಲಾದ ಸಮುದಾಯ ಭವನ/ವಿದ್ಯಾರ್ಥಿ ನಿಲಯಗಳ ವರ್ಷವಾರು ಹಾಗೂ ಜಿಲ್ಲಾವಾರು ವಿವರಗಳು ಹಾಗೂ ಪೂರ್ಣಗೊಂಡಿರುವ ಕಾಮಗಾರಿಗಳ ವಿವರಗಳನ್ನು ಮತ್ತು ಕಾಮಗಾರಿಗಳ ಪ್ರಗತಿಯ ವಿವರಗಳನ್ನು ಇಲಾಖಾ ಅಂತರ್ಜಾಲ https://bcwd.karnataka.gov.in/ ನೀಡಲಾಗಿದೆ. |
| ಆ) | ಕಳೆದ 3 ವರ್ಷಗಳಲ್ಲಿ ಮಂಜೂರಾದ ಸಮುದಾಯ ಭವನಗಳ ಕಾಮಗಾರಿಗಳು ಪ್ರಾರಂಭವಾಗಿದೆಯೇ; ಈ ಪೈಕಿ ಎಷ್ಟು ಪೂರ್ಣಗೊಂಡಿವೆ; ಎಷ್ಟು ಅಪೂರ್ಣಗೊಂಡಿವೆ; ಕಾಮಗಾರಿ ಬಾಕಿ ಇರಲು ಕಾರಣವೇನು; (ವಿವರ ನೀಡುವುದು) | ಮುಂದುವರೆದು ಈಗಾಗಲೇ ಬಿಡುಗಡೆಯಾಗಿರುವ ಮೊದಲನೇ/ಎರಡನೇ ಕಂತಿನ ಅನುದಾನ ಉಪಯೋಗಿಸಿಕೊಂಡಿರುವ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಮತ್ತು ಪ್ರಗತಿ ವರದಿ ಸಲ್ಲಿಸದೆ ಇರುವುದು ಹಾಗೂ ಸಲ್ಲಿಸಿರುವ ಸಂಘ-ಸಂಸ್ಥೆಗಳಿಗೆ ಸಂಬಂಧಿಸಿದಂತೆ ಅನುದಾನದ ಕೊರತೆಯಿಂದಾಗಿ ಬಾಕಿ ಅನುದಾನ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ. |
| ಇ) | ಕಳೆದ 3 ವರ್ಷಗಳಲ್ಲಿ ವರುಣ ವಿಧಾನಸಭಾ ಕ್ಷೇತ್ರದಲ್ಲಿ ಮಂಜೂರಾದ ಸಮುದಾಯ ಭವನದ ಕಾಮಗಾರಿಗಳು ಅನುದಾನ ಬಿಡುಗಡೆ ಮಾಡದ ಕಾರಣ ಅಪೂರ್ಣಗೊಂಡಿರುವ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈವರೆಗೆ ಅನುದಾನ ಬಿಡುಗಡೆ ಮಾಡದೇ ಇರಲು ಕಾರಣವೇನು, ಬಾಕಿ ಇರುವ ಮೊತ್ತವನ್ನು ಯಾವಾಗ ಬಿಡುಗಡೆ ಮಾಡಲಾಗುವುದು? (ವಿವರ ನೀಡುವುದು) | ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿ ವಿವಿಧ ಸಂಘ-ಸಂಸ್ಥೆಗಳು ಮೊದಲನೇ/ಎರಡನೇ ಕಂತಿನ ಅನುದಾನ ಉಪಯೋಗಿಸಿಕೊಂಡು ಹಣ ಬಳಕೆ ಪ್ರಮಾಣ ಪತ್ರ ಹಾಗೂ ಪ್ರಗತಿ ವರದಿಯು ಸ್ವೀಕೃತವಾದ ದಿನಾಂಕದ ಜೇಷ್ಠತೆಯ ಆಧಾರದಲ್ಲಿ ಎರಡನೇ/ಅಂತಿಮ ಕಂತಿನ ಅನುದಾನ ಬಿಡುಗಡೆಗೊಳಿಸಲಾಗುತ್ತಿದ್ದು, ಪ್ರಸ್ತುತ ಅನುದಾನ ಕೊರತೆ ಇರುವುದರಿಂದ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸಿರುವ ಸಮುದಾಯ ಭವನಗಳಿಗೆ ಎರಡನೇ/ಅಂತಿಮ ಕಂತಿನ ಅನುದಾನ ಬಿಡುಗಡೆಗೊಳಿಸಲು ಸಾಧ್ಯವಾಗಿರುವುದಿಲ್ಲ.<br><br>ವಿವಿಧ ಸಮುದಾಯಗಳ ಅಭಿವೃದ್ಧಿ ಯೋಜನೆಯಡಿ ಮುಂದಿನ ಆರ್ಥಿಕ ವರ್ಷಗಳಲ್ಲಿ ಸದರಿ ಕಾರ್ಯಕ್ರಮದಡಿ ಲಭ್ಯವಾಗುವ ಅನುದಾನ ಹಾಗೂ ರಾಜ್ಯದ ಒಟ್ಟಾರೆ ಬೇಡಿಕೆಯನ್ನಾಧರಿಸಿ, ವರುಣಾ ವಿಧಾನ ಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಮುದಾಯ ಭವನಗಳಿಗೆ ಬಾಕಿ ಅನುದಾನ ಬಿಡುಗಡೆಗೊಳಿಸುವ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ:ಹಿಂವಕ 230 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2280
ಸದಸ್ಯರ ಹೆಸರು : ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ)
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ತುಂಗಭದ್ರಾ ನದಿಯಿಂದ ಗುಂಜಳ್ಳಿ ಕೆರೆ ಮತ್ತು ಸುತ್ತಮುತ್ತಲಿನ ಕೆರೆಗಳಿಗೆ ನೀರು ತುಂಬಿಸುವ ಯೋಜನೆಯು 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾಗಿದ್ದು, ಸದರಿ ಯೋಜನೆಯು ಪ್ರಸ್ತುತ ಯಾವ ಹಂತದಲ್ಲಿದೆ; (ಸಂಪೂರ್ಣ ವಿವರವನ್ನು ನೀಡುವುದು) | ರಾಯಚೂರು ತಾಲ್ಲೂಕು ಗುಂಜಳ್ಳಿ ಗ್ರಾಮದ ವಡ್ಡಗೇರಿ ಬಸಪ್ಪ ಕೆರೆಯನ್ನು ತುಂಗಭದ್ರಾ ನದಿಯಿಂದ ನೀರು ತುಂಬಿಸುವ ಯೋಜನೆಯ ವಿವರವಾದ ಯೋಜನಾ ವರದಿಯ ರೂ.129.50 ಕೋಟಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಇಲಾಖೆಯಡಿ ಅನುಮೋದನೆ ಗೊಂಡಿರುವ ಕಾಮಗಾರಿಗಳ ಅಧಿಕ ಕಾರ್ಯಭಾರದ ಹಿನ್ನೆಲೆಯಲ್ಲಿ ಪ್ರಸ್ತಾಪಿತ ಕಾಮಗಾರಿಯನ್ನು ಕೈಬಿಡುವಂತೆ ಅಥವಾ ಮುಂದೂಡುವಂತೆ ಆರ್ಥಿಕ ಇಲಾಖೆಯು ತಿಳಿಸಿದೆ. |
| ಆ) | ಸದರಿ ಯೋಜನೆಯನ್ನು ಕೈಗೆತ್ತಿಕೊಳ್ಳುವ ಇಚ್ಛಾಶಕ್ತಿ ಸರ್ಕಾರಕ್ಕೆ ಇದೆಯೇ; | |
| ಇ) | 2019-20ನೇ ಸಾಲಿನಲ್ಲಿ ಸದರಿ ಕಾಮಗಾರಿಗೆ ಎಷ್ಟು ಅನುದಾನವನ್ನು ಮೀಸಲಿರಿಸಲಾಗಿತ್ತು; ಅದರಲ್ಲಿ ಎಷ್ಟು ಹಣ ಬಳಕೆಯಾಗಿದೆ; ಮೀಸಲಿರಿಸದಿದ್ದಲ್ಲಿ, ಸದರಿ ಯೋಜನೆಗೆ ಯಾವ ವರ್ಷದಲ್ಲಿ ಹಣ ಮೀಸಲಿಡಲಾಗುವುದು ಮತ್ತು ಕಾಮಗಾರಿಯನ್ನು ಪ್ರಾರಂಭಿಸಲಾಗುವುದು? (ಸಂಪೂರ್ಣ ವಿವರವನ್ನು ನೀಡುವುದ) | ಮುಂಬರುವ ವರ್ಷಗಳಲ್ಲಿ ಅನುದಾನದ ಲಭ್ಯತೆಗನುಗುಣವಾಗಿ ಸದರಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ:ಜಸಂಇ 78 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2282

ಸದಸ್ಯರ ಹೆಸರು : ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ)

ಉತ್ತರಿಸಬೇಕಾದ ದಿನಾಂಕ : 23.03.2021

ಉತ್ತರಿಸುವ ಸಚಿವರು : ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿ ಅಡಿಯಲ್ಲಿ ಅನುದಾನವನ್ನು ಯಾವ ಮಾನದಂಡಗಳ ಅನ್ವಯ ಹಂಚಿಕೆ ಮಾಡಲಾಗುತ್ತದೆ; ತಾಲ್ಲೂಕುವಾರು ಅಥವಾ ವಿಧಾನಸಭಾ ಕ್ಷೇತ್ರವಾರು ಹಂಚಿಕೆ ಮಾಡಲಾಗುವುದೇ; (ಸಂಪೂರ್ಣ ವಿವರವನ್ನು ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಡಿ ಡಾ॥ ಡಿ.ಎಂ.ನಂಜುಂಡಪ್ಪ ವರದಿಯನುಸಾರ ತಾಲ್ಲೂಕು ದುಸ್ಥಿತಿ ಸೂಚ್ಯಾಂಕದ ಪ್ರಕಾರ ಅನುದಾನವನ್ನು ಹಂಚಿಕೆ ಮಾಡಲಾಗುವುದು.<br>ತಾಲ್ಲೂಕವನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಮೈಕ್ರೋ ಯೋಜನೆಯಡಿ ತಾಲ್ಲೂಕುವಾರು ಅನುದಾನವನ್ನು ಹಂಚಿಕೆ ಹಾಗೂ ಮ್ಯಾಕ್ರೋ ಯೋಜನೆಯಡಿಯಲ್ಲಿ ಜಿಲ್ಲಾವಾರು ಅನುದಾನ ಹಂಚಿಕೆ ಮಾಡಲಾಗತ್ತಿದೆ. |
| ಆ) | ಕೆಲವೊಂದು ವಿಧಾನಸಭಾ ಕ್ಷೇತ್ರಗಳು ಒಂದೇ ತಾಲ್ಲೂಕಿನಡಿ ಬರುವುದರಿಂದ ಅತಿ ಕಡಿಮೆ ಅನುದಾನ ಹಂಚಿಕೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | -ಬಂದಿದೆ- |
| ಇ) | ಬಂದಿದ್ದಲ್ಲಿ ಈ ತಾರತಮ್ಯ ಸರಿಪಡಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳುತ್ತದೆ? (ಸಂಪೂರ್ಣ ವಿವರ ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಡಿ ಡಾ॥ ಡಿ.ಎಂ.ನಂಜುಂಡಪ್ಪ ವರದಿಯನುಸಾರ ತಾಲ್ಲೂಕು ದುಸ್ಥಿತಿ ಸೂಚ್ಯಾಂಕ ಪ್ರಕಾರ ಅನುದಾನವನ್ನು ಹಂಚಿಕೆ ಮಾಡಲಾಗುತ್ತಿದ್ದು, ಸದರಿ ವರದಿಯು 19 ವರ್ಷಗಳ ಹಳೆಯದಾಗಿರುವುದರಿಂದ ಹೊಸದಾಗಿ ತಾಲ್ಲೂಕು ದುಸ್ಥಿತಿ ಸೂಚ್ಯಾಂಕವನ್ನು ಕಂಡು ಹಿಡಿಯಲು ಉದ್ದೇಶಿಸಲಾಗಿದೆ. |

ಪಿಡಿಎಸ್ 30 ಹೆಚ್‌ಕೆಡಿ 2021

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 2283

**ಸದಸ್ಯರ ಹೆಸರು** : ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ)

**ಉತ್ತರಿಸಬೇಕಾದ ದಿನಾಂಕ** : 23.03.2021

**ಉತ್ತರಿಸುವ ಸಚಿವರು** : ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನಂಜುಂಡಪ್ಪ ವರದಿಯನ್ವಯ ವಿವಿಧ ಯೋಜನೆಯಡಿ ಅನುದಾನವನ್ನು ತಾಲ್ಲೂಕುವಾರು ಅಥವಾ ವಿಧಾನಸಭಾ ಕ್ಷೇತ್ರಾವರು ಹಂಚಿಕೆ ಮಾಡಲಾಗುವುದೇ; (ಸಂಪೂರ್ಣ ವಿವರ ನೀಡುವುದು) | ನಂಜುಂಡಪ್ಪ ವರದಿಯನ್ವಯ ಅನುದಾನವನ್ನು ತಾಲ್ಲೂಕುವಾರು ಹಂಚಿಕೆ ಮಾಡಲಾಗುತ್ತಿದೆ. ಕ್ಷೇತ್ರವಾರು ಹಂಚಿಕೆ ಮಾಡಲಾಗುವುದಿಲ್ಲ.<br>ಅನುದಾನ ಹಂಚಿಕೆ ವಿಧಾನವು ನಂಜುಂಡಪ್ಪ ವರದಿಯಲ್ಲಿ ಸೂಚಿಸಿರುವ ತಾಲ್ಲೂಕು ದುಸ್ಥಿತಿ ಸೂಚ್ಯಾಂಕಕ್ಕೆ ಅನುಗುಣವಾಗಿ ಮಾಡಲಾಗುತ್ತಿದೆ. ನಂಜುಂಡಪ್ಪ ವರದಿಯನ್ವಯ ಕಲಬುರಗಿ ವಿಭಾಗಕ್ಕೆ ಶೇಕಡ 40%ರಷ್ಟು, ಬೆಳಗಾವಿ ವಿಭಾಗಕ್ಕೆ ಶೇಕಡ 20%ರಷ್ಟು ಬೆಂಗಳೂರು ವಿಭಾಗಕ್ಕೆ 25% ರಷ್ಟು ಮತ್ತು ಮೈಸೂರು ವಿಭಾಗಕ್ಕೆ ಶೇಕಡ 15%ರಷ್ಟು ಹಂಚಿಕೆ ಮಾಡಲಾಗುತ್ತಿದೆ. |
| ಆ) | ರಾಜ್ಯದಲ್ಲಿ ಎರಡನೇ ಅತಿ ದೊಡ್ಡ ವಿಧಾನಸಭಾ ಕ್ಷೇತ್ರವಾಗಿರುವ ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರಕ್ಕೆ ಅತಿ ಕಡಿಮೆ ಅನುದಾನ ಹಂಚಿಕೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | -ಬಂದಿದೆ- |
| ಇ) | ಈ ತಾರತಮ್ಯವನ್ನು ಸರಿದೂಗಿಸಲು ಸರ್ಕಾರವು ಪ್ರಸ್ತುತ ಯಾವ ಕ್ರಮ ಕೈಗೊಂಡಿದೆ; ಕೈಗೊಳ್ಳದಿದ್ದಲ್ಲಿ, ಮುಂದಿನ ದಿನಗಳಲ್ಲಿ ಯಾವ ಕ್ರಮ ಕೈಗೊಳ್ಳಲಾಗುವುದು? (ಸಂಪೂರ್ಣ ವಿವರವನ್ನು ನೀಡುವುದು) | ನಂಜುಂಡಪ್ಪ ವರದಿಯು ಸುಮಾರು 20 ವರ್ಷಗಳಷ್ಟು ಹಳೆಯದಾಗಿದ್ದು, ಹೊಸ ಮಾನದಂಡಗಳನ್ನೂ ನಿಗದಿ ಪಡಿಸಲು ಸರ್ಕಾರದ ಪರಿಶೀಲನೆಯಲ್ಲಿ ಇದೆ. |

**ಪಿಡಿಎಸ್ 15 ಎಸ್‌ಡಿಪಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3293
ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್
ಉತ್ತರಿಸಬೇಕಾದ ದಿನಾಂಕ : 23.03.2021
ಉತ್ತರಿಸುವ ಸಚಿವರು : ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸಂಚಾರಿ ನಿಯಮಗಳ ಉಲ್ಲಂಘನೆಯಿಂದ ಸಂಗ್ರಹಿಸುವ ದಂಡದ ಶೇಕಡ 50 ರಷ್ಟು ಮೊತ್ತವನ್ನು ಬೆಂಗಳೂರು ಮಾದರಿಯಲ್ಲಿ ಮೈಸೂರು ಸಂಚಾರಿ ವ್ಯವಸ್ಥೆಯನ್ನು ಅಭಿವೃದ್ಧಿ ಪಡಿಸಲು ಉಪಯೋಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ; | ಹೌದು. |
| (ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯ ವಿವರಗಳೇನು ? | 2020-21ನೇ ಸಾಲಿನಲ್ಲಿ ಪೊಲೀಸ್ ಆಯುಕ್ತರು, ಮೈಸೂರು ನಗರ ರವರಿಗೆ ಸಂಚಾರ ನಿರ್ವಹಣೆಯ ಆವರ್ತಕ ವೆಚ್ಚಗಳ ಪಾವತಿಗಾಗಿ ರೂ.2,33,00,000/- ಗಳನ್ನು ಮತ್ತು ಸಂಚಾರ ಸುಧಾರಣಾ ಉಪಕರಣ/ಸೇವೆಗಳ ಖರೀದಿಗಾಗಿ ರೂ.45,00,000/- (ಒಟ್ಟು ರೂ.2,78,00,000/-) ಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.<br>ಮೈಸೂರು ನಗರದ ಸಂಚಾರ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲು ಮುಂದಿನ ಆರ್ಥಿಕ ವರ್ಷಗಳಲ್ಲಿಯೂ ಸಹ ಅನುದಾನವನ್ನು ಬಿಡುಗಡೆ ಮಾಡಲು ಕ್ರಮಕೈಗೊಳ್ಳಲಾಗುವುದು. |

**ಹೆಚ್‌ಡಿ 207 ಎಸ್‌ಎಸ್‌ಟಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ
ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3301
2. ಸದಸ್ಯರ ಹೆಸರು : ಶ್ರೀ ಸಿದ್ದು ಸವದಿ (ತೇರದಾಳ)
3. ಉತ್ತರಿಸಬೇಕಾದ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ತೇರದಾಳ ಮತಕ್ಷೇತ್ರದಲ್ಲಿ ಹಿಪ್ಪರಗಿ ಬಾಂದಾರದ ಕೆಳಗಡೆ ಸೇತುವೆ ಮತ್ತು ರಸ್ತೆ ಮಂಜೂರಾತಿ ಆಗಿದೆಯೇ? ಯಾವಾಗ ಮಂಜೂರು ಮಾಡಲಾಗಿದೆ? ಪ್ರಸ್ತುತ ಯಾವ ಹಂತತಲುಪಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಹಿಪ್ಪರಗಿ ಬಾಂದಾರದ ಕೆಳಗಡೆ ಸೇತುವೆ ಮತ್ತು ರಸ್ತೆ ನಿರ್ಮಾಣದ ಕಾಮಗಾರಿಯ ರೂ.67.54 ಕೋಟಿ ಮೊತ್ತದ ಪ್ರಸ್ತಾವನೆಗೆ ಸರ್ಕಾರದಿಂದ ದಿನಾಂಕ:23/06/2014 ರಲ್ಲಿ ಮಂಜೂರಾತಿ ನೀಡಲಾಗಿರುತ್ತದೆ. ಅದರನ್ವಯ ಸದರಿ ಕಾಮಗಾರಿಯ ಗುತ್ತಿಗೆಯನ್ನು ದಿನಾಂಕ:26/03/2018 ರಂದು ರೂ.60.65 ಕೋಟಿ ಮೊತ್ತಕ್ಕೆ ಗುತ್ತಿಗೆದಾರರಿಗೆ ವಹಿಸಿಕೊಡಲಾಗಿರುತ್ತದೆ.<br><br>ಸದರಿ ಕಾಮಗಾರಿಯಲ್ಲಿ ಇಲ್ಲಿಯವರೆಗೆ ಸೇತುವೆಯ ಪೀಯರ್ ಸಂಖ್ಯೆ 3, 4, 5, & 6ರ ತಳಪಾಯದ ಕಾಂಕ್ರೀಟೀಕರಣ ಪೂರ್ಣಗೊಳಿಸಿದ್ದು, ಪೀಯರ್ ಸಂಖ್ಯೆ 1, 2, 7, 8, 9, 10 & 11 ರ ತಳಪಾಯ ಮಣ್ಣು ಅಗೆತದ ಕಾರ್ಯವು ಪೂರ್ಣಗೊಳಿಸಲಾಗಿದೆ ಹಾಗೂ ಅಥಣಿ ಬದಿಗೆ ಇರುವ ರಸ್ತೆ ನಿರ್ಮಾಣ ಕಾಮಗಾರಿಯ ಉದ್ದವು ಒಟ್ಟು 4.63 ಕಿ.ಮೀ. ಇದ್ದು ಅದರ ಪೈಕಿ 3.03 ಕಿ.ಮೀ. ಸಬ್ ಗ್ರೇಡ್‌ವರೆಗೆ ಕೆಲಸವು ಮುಗಿದಿರುತ್ತದೆ. |
| ಆ) | ಪ್ರಸ್ತುತ ಕಾಮಗಾರಿ ಸಂಪೂರ್ಣ ಸ್ಥಗಿತವಾಗಲು ಕಾರಣವೇನು; ಯಾವಾಗ ಕಾಮಗಾರಿ ಪ್ರಾರಂಭಿಸಲಾಗುವುದು ಇದರ ವಿಳಂಬಕ್ಕೆ ಕಾರಣಗಳೇನು? | ಕೃಷ್ಣಾ ನದಿಯಲ್ಲಿ ದಿನಾಂಕ:12/08/2019 ರಂದು ನೀರಿನ ಗರಿಷ್ಠ ಮಟ್ಟದಲ್ಲಿ ಪ್ರವಾಹ ಉಂಟಾಗಿದ್ದು, ಹಿಪ್ಪರಗಿ ಬ್ಯಾರೇಜಿನಲ್ಲಿ ದಾಖಲಾದ ಗರಿಷ್ಠ ಮಟ್ಟವು 530.15 ಮೀ. ಹಾಗೂ ನೀರಿನ ಹರಿವು 5.23 ಲಕ್ಷ ಕ್ಯೂಸೆಕ್ಸ್‌ಗಳಷ್ಟು ಆಗಿದ್ದು, ಪ್ರಸ್ತುತ ಸೇತುವೆಯ ಅನುಮೋದಿತ ವಿನ್ಯಾಸವನ್ನು ನದಿಯ ನೀರಿನ ಗರಿಷ್ಠ ಮಟ್ಟ (ಓಎಚ್.ಎಫ್.ಎಲ್) 525.50 ಮೀ. ಎಂದು ಪರಿಗಣಿಸಲಾಗಿರುತ್ತದೆ.<br><br>ಈ ಹಿನ್ನೆಲೆಯಲ್ಲಿ, ಆಗಸ್ಟ್ 2019ರಲ್ಲಿ ಕೃಷ್ಣಾ ನದಿಯಲ್ಲಿ ಬಂದಂತಹ ಗರಿಷ್ಠ ಮಟ್ಟದ ಪ್ರವಾಹವನ್ನು ಪರಿಗಣಿಸಿ, ಸೇತುವೆಯ ವೆಂಟ್‌ಗಳನ್ನು ಹೆಚ್ಚಿಸಲು ಹಾಗೂ ಸೇತುವೆಯ ತಳದ ಸ್ಲಾಬ್ ವಿನ್ಯಾಸವನ್ನು ಗರಿಷ್ಠ ಮಟ್ಟಕ್ಕೆ ಎತ್ತರಿಸುವ ಹಿನ್ನಲೆಯಲ್ಲಿ ಹಾಗೂ ಮುಂದೆ ಸೇತುವೆಗೆ ಗರಿಷ್ಠ ಪ್ರಮಾಣದ ಪ್ರವಾಹದಿಂದ ಆಗುವ ಅನಾಹುತಗಳನ್ನು ತಪ್ಪಿಸಲು, ಪರಿಷ್ಕೃತ ಗರಿಷ್ಠ ಮಟ್ಟದ ಪ್ರವಾಹಕ್ಕೆ ಅನುಸಾರವಾಗಿ ಸೇತುವೆಯ ವಿನ್ಯಾಸ ಮತ್ತು ನಕ್ಷೆಗಳನ್ವಯ ಪ್ರಸ್ತಾವನೆಯನ್ನು ತಯಾರಿಸುವ ಪ್ರಕ್ರಿಯೆಯು ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

**ಸಂಖ್ಯೆ: ಜಸಂಇ 48 ಡಬ್ಲ್ಯೂಎಲ್‌ಎ 2021**

ಬಿ.ಎಸ್

(ಬಿ.ಎಸ್ ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3304 |
| ಸದಸ್ಯರ ಹೆಸರು | : | ಡಾ॥ ಅಜಯ್ ದರ್ಮ ಸಿಂಗ್ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯಲ್ಲಿ ಕ್ರೀಡಾಪಟುಗಳ ಸಾಮರ್ಥ್ಯ ಹೆಚ್ಚಿಸಿ ಅವರನ್ನು ಉತ್ತೇಜಿಸಲು ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಯ ವತಿಯಿಂದ ಅಂತರಾಷ್ಟ್ರೀಯ ಕ್ರೀಡಾ ಸಂಕೀರ್ಣ ನಿರ್ಮಿಸಲು ಸರ್ಕಾರ ಆಲೋಚಿಸಿದೆಯೇ; | ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಯ ವತಿಯಿಂದ ಕಲಬುರಗಿ ಜಿಲ್ಲೆಯಲ್ಲಿ ಕ್ರೀಡಾಪಟುಗಳ ಸಾಮರ್ಥ್ಯವನ್ನು ಹೆಚ್ಚಿಸಿ ಅವರನ್ನು ಅಂತರಾಷ್ಟ್ರೀಯ ಕ್ರೀಡಾ ಸ್ಪರ್ಧೆಯಲ್ಲಿ ಭಾಗವಹಿಸಲು ಸಹಕಾರಿಯಾಗುವ ದೃಷ್ಠಿಯಿಂದ ಕ್ರೀಡಾ ಸಂಕೀರ್ಣ ನಿರ್ಮಿಸುವ ಕ್ರಮಕೈಗೊಳ್ಳಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಸದರಿ ಕ್ರೀಡಾ ಸಂಕೀರ್ಣವನ್ನು ಎಲ್ಲಿ ತೆರೆಯಲು ನಿರ್ಧರಿಸಲಾಗಿದೆ; | ಜಿಲ್ಲಾಧಿಕಾರಿ, ಕಲಬುರಗಿರವರಿಗೆ ಸೂಕ್ತ ಜಮೀನನ್ನು ಆಯ್ಕೆ ಮಾಡಲು ಪತ್ರ ವ್ಯವಹಾರ ಮಾಡಲಾಗಿದೆ. |
| ಇ) | ಈ ಸಂಬಂಧ, ಯಾವ ಪ್ರಾರಂಭಿಕ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ? (ವಿವರ ನೀಡುವುದು) | ಸೂಕ್ತ ನಿವೇಶನ ದೊರೆತ ನಂತರ ಕ್ರೀಡಾ ಸಂಕೀರ್ಣ ಪ್ರಾರಂಭಿಸುವ ಕುರಿತು ಅಗತ್ಯ ಕ್ರಮ ಕೈಗೊಳ್ಳಲಾಗುವುದು. |

**ಪಿಡಿಎಸ್ 32 ಹೆಚ್‌ಕೆಡಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3321 |
| ಸದಸ್ಯರ ಹೆಸರು | : | ಶ್ರೀ.ಈಶ್ವರ್ ಖಂಡ್ರೆ (ಭಾಲ್ಕಿ) |
| ಉತ್ತರಿಸುವ ದಿನಾಂಕ | : | 23-03-2021 |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | 2019-20 ನೇ ಸಾಲಿನ ಆಯವ್ಯಯದಲ್ಲಿ ಬೀದರ್ ಜಿಲ್ಲೆಯಲ್ಲಿ ಯಾವ ಯಾವ ನೀರಾವರಿ ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗಿದೆ; ಇದಕ್ಕೆ ಎಷ್ಟು ಅನುದಾನ ಮೀಸಲಿಡಲಾಗಿದೆ; ಇಲ್ಲಿಯವರೆಗೆ ಸದರಿ ಯೋಜನೆಗಳ ವಾಸ್ತವಿಕ ಸ್ಥಿತಿಗಳೇನು; (ಸಂಪೂರ್ಣ ವಿವರ ನೀಡುವದು) | ಬೀದರ್ ಜಿಲ್ಲೆಯಲ್ಲಿ 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದ ಯೋಜನೆಗಳ ವಿವರಗಳು ಕೆಳಗಿನಂತಿವೆ: (ಕೆಳಗಿನ ಕೋಷ್ಟಕ ನೋಡಿ) |
| ಆ | 2019-20 ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದಂತಹ ಕಾಮಗಾರಿಗಳಲ್ಲಿ ಇನ್ನೂ ಅನೇಕ ಕಾಮಗಾರಿಗಳು ಇದೂವರೆಗೂ ಪ್ರಾರಂಭವಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ | ಈ ಬಗ್ಗೆ ಈಗಲಾದರೂ ಸರ್ಕಾರ ಆಯವ್ಯಯದಲ್ಲಿ ಘೋಷಿಸಲಾದಂತಹ ವಿವಿಧ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಕ್ರಮವಹಿಸುವುದೇ? | ಸದರಿ ಯೋಜನೆಗಳಿಗೆ ಅನುದಾನದ ಲಭ್ಯತೆ ಮೇರೆಗೆ ಆರ್ಥಿಕ ಇಲಾಖೆಯ ಸಹಮತಿ ಪಡೆದು. ಅಗತ್ಯ ಕ್ರಮ ವಹಿಸಲು ಯೋಜಿಸಿದೆ. |

| ಕ್ರ ಸಂ. | 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದ ಯೋಜನೆಗಳ ವಿವರಗಳು | ಆಯ್ಯವ್ಯಯದಲ್ಲಿ ಘೋಷಣೆಯಾದ ಮೊತ್ತ ರೂ. ಕೋಟಿಗಳಲ್ಲಿ | ಪ್ರಸ್ತುತ ಹಂತ |
|---|---|---|---|
| 1 | ಬಸವಕಲ್ಯಾಣ ಮತ್ತು ಭಾಲ್ಕಿ ತಾಲೂಕುಗಳ ಜಮೀನುಗಳಿಗೆ ನೀರಾವರಿ ಒದಗಿಸುವ ಹಾಗೂ ಕೆರೆಗಳನ್ನು ತುಂಬಿಸುವ ಯೋಜನೆ. | 75.00 | ಸದರಿ ಯೋಜನೆಗೆ ಮೊದಲನೇ ಹಂತದ ಕಾಮಗಾರಿಗಳನ್ನು ಕೈಗೊಳ್ಳಲು ರೂ.647.94 ಕೋಟಿಗಳ ಮೊತ್ತದ ಯೋಜನಾ ವರದಿಯನ್ನು ಆರ್ಥಿಕ ಇಲಾಖೆಯ ಸಹಮತಿಗಾಗಿ ಕಳುಹಿಸಲಾಗಿ, ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಯನ್ನು ಪ್ರಸ್ತುತ ಮುಂದೂಡುವಂತೆ ನಿರ್ದೇಶಿಸಿರುತ್ತದೆ. |
| 2) | ಬೀದರ ನಗರ ವ್ಯಾಪ್ತಿಯಲ್ಲಿ ಬರುವ ಕೆರೆಗಳನ್ನು ಮಾಂಜ್ರಾ ನದಿಯಿಂದ ನೀರನ್ನು ತುಂಬಿಸುವ ಯೋಜನೆ. | 75.00 | ಸದರಿ ಪ್ರಸ್ತಾವನೆಗೆ ವಿಸ್ತೃತ ಯೋಜನಾ ವರಿದಿಯನ್ನು ಕರ್ನಾಟಕ ನೀರಾವರಿ ನಿಗಮದ ತಯಾರಿಕಾ ಹಂತದಲ್ಲಿರುತ್ತದೆ. |
| 3) | ಕಾರಂಜಾ ಯೋಜನೆಯ ಎಡದಂಡೆ ಮತ್ತು ಬಲದಂಡೆ ಕಾಲುವೆಗಳ ಅಚ್ಚುಕಟ್ಟು ಪ್ರದೇಶಕ್ಕೆ ನೀರಾವರಿ ಯೋಜನೆ | 80.00 | |

ಸಂಖ್ಯೆ:ಜಸಂಇ 81 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3332
2. ಸದಸ್ಯರ ಹೆಸರು : ಡಾ॥ ಯತೀಂದ್ರ ಸಿದ್ದರಾಮಯ್ಯ
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ವರುಣಾ ವಿಧಾನಸಭಾ ಕ್ಷೇತ್ರದ ನಂಜನಗೂಡು ತಾಲ್ಲೂಕು ದೊಡ್ಡಕೌಲಂದೆ ಭಾಗದಲ್ಲಿ ನೀರಿಗೆ ತೊಂದರೆಯಿದ್ದು, ನೀರಿನ ಕೊರತೆ ನೀಗಿಸಲು ಹೊಸದಾಗಿ ಕೆರೆಗೆ ನೀರು ತುಂಬಿಸುವ ಯೋಜನೆಯನ್ನು ಕೈಗೊಳ್ಳಲಾಗಿದೆಯೇ; ಇಲ್ಲದಿದ್ದಲ್ಲಿ, ಯಾವಾಗ ಕೈಗೊಳ್ಳಲಾಗುವುದು; ಯಾವಾಗ ಮಂಜೂರಾತಿ ಮಾಡಲಾಗುವುದು; (ವಿವರ ನೀಡುವುದು) | ವರುಣಾ ವಿಧಾನಸಭಾ ಕ್ಷೇತ್ರದ ನಂಜನಗೂಡು ತಾಲ್ಲೂಕು ದೊಡ್ಡಕೌಲಂದೆ ಭಾಗದಲ್ಲಿ ಬರುವ ಹಳೆಮರ ಕೆರೆ, ಕೊಣನೂರು ಕೆರೆಗಳಿಗೆ ಆಲಂಬೂರು ಏತ ಯೋಜನೆಯ ಮೊದಲನೇ ಹಂತದಡಿ ನೀರು ತುಂಬಿಸಲಾಗುತ್ತಿದೆ. ಸದರಿ ಯೋಜನೆಯನ್ನು 2014-15 ರಲ್ಲಿ ಚಾಲನೆಗೊಳಿಸಲಾಗಿದ್ದು, ಆ ಸಾಲಿನಿಂದ ಪ್ರಸ್ತುತ ಸಾಲಿನವರೆಗೂ ನೀರನ್ನು ಹರಿಸಲಾಗುತ್ತಿದೆ. ಆಲಂಬೂರು ಮೊದಲನೇ ಹಂತದಡಿ ಹೆಚ್ಚುವರಿಯಾಗಿ ಚುಂಚನಹಳ್ಳಿ ಕೆರೆಗೆ ನೀರು ತುಂಬಿಸಲಾಗುತ್ತಿದೆ.<br><br>ಈ ಭಾಗದಲ್ಲಿ ಬರುವ ಕೆರೆಗಳಿಗೆ ನೀರು ತುಂಬಿಸುವ ಯಾವುದೇ ಹೊಸ ಪ್ರಸ್ತಾಪವಿರುವುದಿಲ್ಲ. |
| ಆ | ಈ ಕ್ಷೇತ್ರದಲ್ಲಿ ಹಾರೋಹಳ್ಳಿ ಲೋ-ಲೆವೆಲ್ ನಾಲಾ ಕಾಮಗಾರಿಯನ್ನು ಕೈಗೊಳ್ಳಲು ಕಳೆದ ಎರಡು ವರ್ಷಗಳಿಂದ ಅನುಮೋದನೆಗೆ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವಾಗ ಮಂಜೂರಾತಿ ನೀಡಲಾಗುವುದು; (ವಿವರ ನೀಡುವುದು) | ವರುಣಾ ವಿಧಾನಸಭಾ ಕ್ಷೇತ್ರದ ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆಯ ಹಾರೋಹಳ್ಳಿ ಲೋ-ಲೆವೆಲ್ ನಾಲಾ ಆಧುನೀಕರಣ ಕಾಮಗಾರಿಯ ರೂ.21.80 ಕೋಟಿ ಮೊತ್ತದ ಅಂದಾಜು ಪ್ರಸ್ತಾವನೆ ಕುರಿತು ಆರ್ಥಿಕ ಇಲಾಖೆಯು ಜಲ ಸಂಪನ್ಮೂಲ ಇಲಾಖೆಯಡಿ ಈಗಾಗಲೇ ಅನುಮೋದಿತ ಕಾಮಗಾರಿಗಳ ಕಾರ್ಯಭಾರ ಅಧಿಕವಾಗಿರುವುದರಿಂದ, ಪ್ರಸ್ತಾಪಿತ ಕಾಮಗಾರಿಯನ್ನು ಕೈಗೆತ್ತಿಕೊಳ್ಳುವುದನ್ನು ಕೈಬಿಡುವಂತೆ ಸೂಚಿಸಿರುತ್ತದೆ.<br><br>ಸದರಿ ಕಾಮಗಾರಿಯನ್ನು ಮುಂಬರುವ ಆರ್ಥಿಕ ವರ್ಷಗಳಲ್ಲಿ ಅನುದಾನದ ಲಭ್ಯತೆಗನುಸಾರವಾಗಿ ಕೈಗೊಳ್ಳುವ ಕುರಿತು ಪರಿಶೀಲಿಸಲಾಗುವುದು. |

*ಸಂಖ್ಯೆ:ಜಸಂಇ 81 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3349
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 22.03.2021

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಎಲ್ಲಾ ಕಡೆಗೂ ಒಂದೇ ಮಾದರಿಯಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಿಸಬೇಕೆಂಬ ಉದ್ದೇಶದಿಂದ ಸರ್ಕಾರದ ವಾಸ್ತು ಶಿಲ್ಪ ಇಲಾಖೆಯವರಿಂದ ನೀಲಿ ನಕ್ಷೆ ತಯಾರಿಸಿ ಕಟ್ಟಡ ಕಟ್ಟುತ್ತಿರುವುದು ನಿಜವೇ; | ಹೌದು |
| ಆ) | ಸಾರ್ವಜನಿಕರ ಅನುಕೂಲತೆಗಾಗಿ ಕಂದಾಯ ಇಲಾಖೆಯ ಎಲ್ಲಾ ಕಛೇರಿಗಳು ಒಂದೇ ಸೂರಿನಡಿಯಲ್ಲಿ ಇರಬೇಕು ಎಂಬ ಉದ್ದೇಶದಿಂದ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಮಿನಿ ವಿಧಾನಸೌಧ ಕಟ್ಟಲಾಗುತ್ತಿರುವ ಸಂಗತಿ ನಿಜವಲ್ಲವೇ; | ಹೌದು |
| ಇ) | ಬೈಲಹೊಂಗಲ ನಗರದಲ್ಲಿ ತಹಶೀಲ್ದಾರ್ ಕಛೇರಿ, ಉಪ ವಿಭಾಗಾಧಿಕಾರಿಗಳ ಕಛೇರಿ ಹಾಗೂ ಇನ್ನೂ ಹಲವು ಸರ್ಕಾರಿ ಕಛೇರಿಗಳು, ಬೇರೆ ಬೇರೆ ಕಡೆಗಳಲ್ಲಿ ಕೆಲಸ ನಿರ್ವಹಿಸುತ್ತಿರವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಈ) | ಹಾಗಿದ್ದಲ್ಲಿ, ಕೂಡಲೇ ಅರ್ಧಕ್ಕೆ ಕಟ್ಟಿದ ಬೈಲಹೊಂಗಲ ನಗದಲ್ಲಿರುವ ಮಿನಿ ವಿಧಾನಸೌಧ ಕಟ್ಟಡವನ್ನು ವಾಸ್ತುಶಿಲ್ಪಿಗಳ ಪ್ಲ್ಯಾನ್ ಪ್ರಕಾರ ಪೂರ್ಣಗೊಳಿಸಿ ಎಲ್ಲಾ ಸರ್ಕಾರಿ ಕಛೇರಿಗಳನ್ನು ಒಂದೇ ಸೂರಿನಡಿಯಲ್ಲಿ ಪ್ರಾರಂಭಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಬೈಲಹೊಂಗಲ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ಕಟ್ಟಡವನ್ನು 2002ನೇ ಸಾಲಿನಲ್ಲಿ ರೂ.54.31 ಲಕ್ಷಗಳಲ್ಲಿ ನಿರ್ಮಿಸಲಾಗಿದೆ.<br><br>ಎಲ್ಲಾ ಸರ್ಕಾರಿ ಕಛೇರಿಗಳು ಒಂದೇ ಸೂರಿನಡಿಯಲ್ಲಿ ಕಾರ್ಯನಿರ್ವಹಿಸಲು ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಸ್ವೀಕೃತವಾದಲ್ಲಿ ಪರಿಶೀಲಸಲಾಗುತ್ತದೆ. |

ಕಂಇ 44 ಡಬ್ಲ್ಯೂಬಿಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3351 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶ್ರೀ ಬೆಳ್ಳಿಪ್ರಕಾಶ್ (ಕಡೂರು) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಡೂರು ವಿಧಾನಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಹಿಂದುಳಿದ ವರ್ಗಳ ಕಲ್ಯಾಣ ಇಲಾಖೆಯಿಂದ ಮಂಜೂರಾದ ವಿವಿಧ ರೀತಿಯ ಭವನಗಳು, ವಿದ್ಯಾರ್ಥಿ ನಿಲಯಗಳು ಎಷ್ಟು (ಮಂಜೂರಾದ ಭವನಗಳು ಹಾಗೂ ವಿದ್ಯಾರ್ಥಿ ನಿಲಯಗಳ ಸಂಪೂರ್ಣ ವಿವರಗಳನ್ನು ನೀಡುವುದು); | ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿ ಕಳೆದ ಮೂರು ವರ್ಷಗಳಿಂದ ಇಲ್ಲಿಯವರಗೆ ಕಡೂರು ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿವಿಧ ಸಂಘ-ಸಂಸ್ಥೆಗಳಿಗೆ ಸಹಾಯಧನ ಮಂಜೂರಾಗಿರುವ ಹಾಗೂ ಬಿಡುಗಡೆಯಾಗಿರುವ ಅನುದಾನದ ಸಂಪೂರ್ಣ ವಿವರಗಳನ್ನು **ಅನುಬಂಧಲ್ಲಿ** ನೀಡಲಾಗಿದೆ. |
| ಆ) | ಅವುಗಳಲ್ಲಿ ಎಷ್ಟು ಭವನಗಳಿಗೆ ತಾತ್ವಿಕ ಮತ್ತು ಆಡಳಿತಾತ್ಮಕ ಮಂಜೂರಾತಿ ದೊರಕಿದೆ; ಆಡಳಿತಾತ್ಮಕ ಮಂಜೂರಾತಿಯೊಂದಿಗೆ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡಿರುವ ಭವನಗಳು ಎಷ್ಟು (ವರ್ಷವಾರು ಪೂರ್ಣ ವಿವರಗಳನ್ನು ನೀಡುವುದು); | |
| ಇ) | ತಾತ್ವಿಕ ಮಂಜೂರಾತಿ ದೊರೆತು ಆಡಳಿತಾತ್ಮಕ ಮಂಜೂರಾತಿ ದೊರೆಯದೇ ಹಾಗೂ ಅನುದಾನ ಬಿಡುಗಡೆಯಾಗದಿರುವ ಭವನಗಳು ಎಷ್ಟು; ಆಡಳಿತಾತ್ಮಕ ಮಂಜೂರಾತಿ ನೀಡುವುದಕ್ಕೆ ಬಾಕಿ ಇರಲು ಕಾರಣಗಳೇನು: (ವರ್ಷವಾರು ಸಂಪೂರ್ಣ ವಿವರಗಳನ್ನು ನೀಡುವುದು); | ಯಾವುದು ಬಾಕಿ ಇರುವುದಿಲ್ಲ. |
| ಈ) | ಆಡಳಿತಾತ್ಮಕ ಮಂಜೂರಾತಿ ದೊರೆತು ಈಗಾಗಲೇ ನಿರ್ಮಾಣಗೊಂಡಿರುವ ಮತ್ತು ನಿರ್ಮಾಣ ಹಂತದಲ್ಲಿರುವ ಭವನಗಳ ಭೌತಿಕ ಮತ್ತು ಆರ್ಥಿಕ ಸ್ಥಿತಿಗಳಿಗಳೇನು (ಭವನವಾರು ಪೂರ್ಣ ವಿವರಗಳನ್ನು ನೀಡುವುದು); | ಸರ್ಕಾರದಿಂದ ಮಂಜೂರಾತಿಯಾದ ಸಮುದಾಯಗಳಿಗೆ ಬಿಡುಗಡೆಯಾದ ಅನುದಾನದ ವಿವರ ಹಾಗೂ ಕಟ್ಟಡ ಪ್ರಗತಿಯ ಹಂತವನ್ನು **ಅನುಬಂಧಲ್ಲಿ** ನೀಡಲಾಗಿದೆ. |
| ಉ) | ಮಂಜೂರಾಗಿರುವ ಭವನಗಳನ್ನು ಪೂರ್ಣಗೊಳಿಸಲು ಸರ್ಕಾರ ಯಾವುದಾದರೂ ಕಾಲಮಿತಿ ನಿಗಧಿಪಡಿಸಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು? | ಸರ್ಕಾರದ ಆದೇಶ ಸಂಖ್ಯೆ: ಹಿಂವಕ 695 ಬಿಎಂಎಸ್ 2014 (ಭಾ-2), ದಿನಾಂಕ : 05.11.2014 ರ ಮಾರ್ಗಸೂಚಿಗಳಲ್ಲಿ ಮೂರು ವರ್ಷಗಳು ಕಾಲಮಿತಿ ನಿಗಧಿಪಡಿಸಿದ್ದು, ಆದರೆ ಸಂಸ್ಥೆಯವರು ನೀಡುವ ವಿವರಣೆಯನ್ನು ಪರಿಶೀಲಿಸಿ ಕಟ್ಟಡ ನಿರ್ಮಾಣಕ್ಕೆ ಹೆಚ್ಚುವರಿ ಕಾಲಾವಕಾಶವನ್ನು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ನೀಡಬಹುದು, ಆದರೆ ಇದು ಒಟ್ಟಾರೆ 4 ವರ್ಷಗಳಿಗೆ ಮೀರಬಾರದು ಎಂದು ಇರುತ್ತದೆ.<br>ಅದಾಗ್ಯೂ, ಮಂಜೂರಾಗಿರುವ ಭವನಗಳ/ವಿದ್ಯಾರ್ಥಿ ನಿಲಯಗಳ ಕಾಮಗಾರಿಯನ್ನು ಪೂರ್ಣಗೊಳಿಸಲು ಸರ್ಕಾರದಿಂದ ಮಂಜೂರಾತಿ ಮೊತ್ತಕ್ಕೆ ಸಮನಾಗಿ ಬಾಕಿ ಅನುದಾನ ಬಿಡುಗಡೆಗೊಳಿಸುವುದು, ಸದರಿ ಯೋಜನೆಯಡಿ ಲಭ್ಯವಿರುವ ಅನುದಾನ ಹಾಗೂ ರಾಜ್ಯದ ಒಟ್ಟಾರೆ ಬೇಡಿಕೆಯನ್ನಾಧರಿಸಿರುತ್ತದೆ. |

ಸಂಖ್ಯೆ:ಹಿಂವಕ 213 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ



**ಕರ್ನಾಟಕ ವಿಧಾನಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3353
ವಿಧಾನಸಭೆ ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ)
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖೆಯಡಿಯ ವಿದ್ಯಾರ್ಥಿ ಹಾಸ್ಟೆಲ್ ಹಾಗೂ ವಸತಿ ಶಾಲೆಗಳ 'ಡಿ' ವರ್ಗದ ಹೊರಗುತ್ತಿಗೆ ನೌಕರರಿಗೆ ಲಾಕ್‌ಡೌನ್ ಅವಧಿಯ ವೇತನ ಪಾವತಿ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ವಿವರ ನೀಡುವುದು); | ಬಂದಿದೆ.<br><br>ಕೋವಿಡ್-19 ಹಿನ್ನೆಲೆಯಲ್ಲಿ ಜಿಲ್ಲಾ ಹಂತದಲ್ಲಿನ ಕ್ವಾರಂಟೈನ್ ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸಿರುವ ಹೊರ ಸಂಪನ್ಮೂಲ ಸಿಬ್ಬಂದಿಗಳಿಗೆ ಜಿಲ್ಲಾ ಹಂತದಲ್ಲಿ ವೇತನ ಪಾವತಿಸಲು ಕ್ರಮ ವಹಿಸಲಾಗಿದೆ. ಉಳಿದ ಹೊರ ಸಂಪನ್ಮೂಲ ಸಿಬ್ಬಂದಿಗಳಿಗೆ ಲಾಕ್‌ಡೌನ್ ಅವಧಿ ವೇತನ ಪಾವತಿ ಕುರಿತು ಅನುದಾನ ಬಿಡುಗಡೆ ಮಾಡುವ ಸಂಬಂಧ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿದ್ದು, ಪರಿಶೀಲನೆಯಲ್ಲಿದೆ. |
| ಆ) | ಇವರುಗಳಿಗೆ ಸೇವಾ ಭದ್ರತೆ ನೀಡುವ ಚಿಂತನೆ ಸರ್ಕಾರಕ್ಕಿದೆಯೇ (ವಿವರ ನೀಡುವುದು); | ಹೊರಸಂಪನ್ಮೂಲ ಮೂಲಕ ನೇಮಕ ಮಾಡಿಕೊಂಡ ಸಿಬ್ಬಂದಿಗಳಿಗೆ ಸೇವಾ ಭದ್ರತೆ ಒದಗಿಸುವ ಕುರಿತು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |
| ಇ) | 'ಡಿ' ವರ್ಗದ ಹೊರಗುತ್ತಿಗೆ ನೌಕರರ ಬೇಡಿಕೆ ಈಡೇರಿಸಲು ಸರ್ಕಾರಕ್ಕಿರುವ ಅಡೆತಡೆಗಳೇನು; | ಹೊರಸಂಪನ್ಮೂಲ ನೌಕರರ ಬೇಡಿಕೆಗಳಲ್ಲಿ ಪ್ರಮುಖವಾಗಿ 2018-19 ಮತ್ತು 2019-20ನೇ ಸಾಲಿನ ಬಾಕಿ ವೇತನ ಬಿಡುಗಡೆಗೆ ಕ್ರಮವಹಿಸಲಾಗಿದೆ. ಅಲ್ಲದೇ ಇ.ಎಸ್.ಐ ಮತ್ತು ಇ.ಪಿ.ಎಫ್ ಪಾವತಿ ಕುರಿತು ನಿಗದಿತ ಅವಧಿಯೊಳಗೆ ವೇತನ ಪಾವತಿಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ತಿಳಿಸಿ, ಎಲ್ಲಾ ಜಿಲ್ಲೆಗಳ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. |
| ಈ) | ಯಾವ ಕಾಲಾವಧಿಯೊಳಗೆ ಸಮಸ್ಯೆಯನ್ನು ಈಡೇರಿಸಲಾಗುತ್ತದೆ? | |

ಸಕಇ 126 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3254 |
| ಸದಸ್ಯರ ಹೆಸರು | : | ಶ್ರೀ.ನಿರಂಜನ್ ಕುಮಾರ್.ಸಿ.ಎಸ್ (ಗುಂಡ್ಲುಪೇಟೆ) |
| ಉತ್ತರಿಸುವ ದಿನಾಂಕ | : | 22.03.2021 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಗುಂಡ್ಲುಪೇಟೆ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ಹೊಸದಾಗಿ ಪಶು ಚಿಕಿತ್ಸಾ ಕೇಂದ್ರಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಪಶುಚಿಕಿತ್ಸಾ ಕೇಂದ್ರಗಳನ್ನು ಯಾವ ಯಾವ ಗ್ರಾಮಗಳಿಗೆ ಮತ್ತು ಯಾವಾಗ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಗುಂಡ್ಲುಪೇಟೆ ಕ್ಷೇತ್ರದ ವ್ಯಾಪ್ತಿಯಲ್ಲಿ ಬನ್ನಿತಾಳಪುರ, ಸೋಮಹಳ್ಳಿ ಹಾಗೂ ಕೊಡಸೋಗೆ ಗ್ರಾಮಗಳಿಗೆ ಹೊಸದಾಗಿ ಪಶುಚಿಕಿತ್ಸಾ ಕೇಂದ್ರಗಳನ್ನು ಮಂಜೂರು ಮಾಡಲು ಮನವಿ ಸ್ವೀಕೃತಗೊಂಡಿರುತ್ತದೆ.<br>ಆದರೆ, ಪ್ರಸ್ತುತ ಗುಂಡ್ಲುಪೇಟೆ ಸೇರಿದಂತೆ ರಾಜ್ಯದಲ್ಲಿ ಯಾವುದೇ ಹೊಸ ಪಶು ಆಸ್ಪತ್ರೆ/ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವ ಕಾರ್ಯಕ್ರಮ ಸರ್ಕಾರದ ಮುಂದಿರುವುದಿಲ್ಲ. |

ಸಂ: ಪಸಂಮೀ ಇ-42 ಪಸಸೇ 2021

(ಪ್ರಭು.ಬಿ.ಚವ್ಹಾಣ್)
ಪಶುಸಂಗೋಪನೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 3360

ಸದಸ್ಯರ ಹೆಸರು :: ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ)

ಉತ್ತರಿಸುವ ದಿನಾಂಕ :: 22.03.2021

ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ದಕ್ಷಿಣ ಕ್ಷೇತ್ರದ ವಿವಿಧ ಧರ್ಮದವರಿಂದ ಯಾವ ಯಾವ ಗ್ರಾಮಗಳಲ್ಲಿ ಶವಸಂಸ್ಕಾರ ಮಾಡಲು ಸ್ಮಶಾನ ಜಮೀನಿಗಾಗಿ ಎಷ್ಟು ಬೇಡಿಕೆಗಳು ಸಲ್ಲಿಕೆಯಾಗಿರುತ್ತವೆ, | ಬೀದರ್ ದಕ್ಷಿಣ ಕ್ಷೇತ್ರದ 15 ಗ್ರಾಮಗಳಿಗೆ ಸ್ಮಶಾನ ಭೂಮಿಗಾಗಿ ಬೇಡಿಕೆಗಳನ್ನು ಸಲ್ಲಿಸಿರುತ್ತಾರೆ. |
| ಆ) | ಈ ಪೈಕಿ ಯಾವ ಧರ್ಮದ ಜನಾಂಗದವರಿಗೆ ಯಾವ ಯಾವ ಗ್ರಾಮಗಳಲ್ಲಿ ಎಷ್ಟೆಷ್ಟು ಜಮೀನನ್ನು ಮಂಜೂರು ಮಾಡಲಾಗಿದೆ; | (ಕೆಳಗಿನ ಕೋಷ್ಟಕ ನೋಡಿ) |

| ಕ್ರ. ಸಂ | ಗ್ರಾಮ | ಸ.ನಂ. | ವಿಸ್ತೀರ್ಣ | ವರ್ಗ |
|---|---|---|---|---|
| 1 | ಸಿರಕಟನಹಳ್ಳಿ | 95 | 00-10 ಗುಂಟೆ<br>00-10 ಗುಂಟೆ | (ಎಸ್.ಸಿ)<br>(ಎಸ್.ಟಿ) |
| 2 | ಮರಕುಂದಾ | 295/ಪಿ1 | 03-20 ಎ/ಗು | (ಸಾಮೂಹಿಕ) |
| 3 | ಹೊಕ್ರಾಣಾ(ಬಿ) | 51/6 | 00-20 ಗುಂಟೆ | (ಸಾಮೂಹಿಕ) |
| 4 | ಶಹಾಪೂರ | 2 | 2-30 ಎ/ಗು | (ಸಾಮೂಹಿಕ) |
| 5 | ಚೌಳಿ | 4/1 | 1-10 ಎ/ಗು | (ಸಾಮೂಹಿಕ) |
| 6 | ಬಂಬಳಗಿ | 27/6 | 0-10 ಗುಂಟೆ | (ಎಸ್.ಸಿ) |
| 7 | ಶೇಕಾಪೂರ | 6 | 2-00 ಎಕರೆ | (ಸಾಮೂಹಿಕ) |
| 8 | ಸಿರ್ಸಿ(ಎ) | 194 | 00-06 ಗುಂಟೆ | (ಸಣ್ಣ ಮಕ್ಕಳ ಸಾಮೂಹಿಕ) |
| 9 | ಮಲ್ಕಾಪೂರ | 97 | 03-20 ಎ/ಗು | (ಸಾಮೂಹಿಕ) |
| 10 | ಗೋರನಳ್ಳಿ(ಬಿ) | 16/1 | 2-00 ಎಕರೆ | (ಸಾಮೂಹಿಕ) |
| 11 | ಅತಿವಾಳ | 1 | 0-10 ಗುಂಟೆ<br>0-20 ಗುಂಟೆ<br>0-10 ಗುಂಟೆ | (ಎಸ್.ಸಿ)<br>(ಎಸ್.ಟಿ<br>(ಕ್ರಿಶ್ಚನ್) |
| 12 | ಹೊನ್ನಡ್ಡಿ | 24/1 | 01-00 ಎಕರೆ | (ಸಾಮೂಹಿಕ) |
| 13 | ತಡಪಳ್ಳಿ | 128 | (00-10 ಗುಂಟೆ | (ಎಸ್.ಸಿ)<br>(ಕ್ರಿಶ್ಚನ್) |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಇನ್ನು ಎಷ್ಟು ಗ್ರಾಮಗಳಲ್ಲಿ ಜಮೀನನ್ನು ಮಂಜೂರು ಮಾಡಬೇಕಾಗಿದೆ; ಯಾವಾಗ ಮಂಜೂರು ಮಾಡಲಾಗುವುದು? (ವಿವರವಾದ ಮಾಹಿತಿಯನ್ನು ನೀಡುವುದು) | ಇನ್ನು ಎರಡು ಗ್ರಾಮಗಳಲ್ಲಿ ಸರ್ಕಾರಿ ಜಮೀನು ಲಭ್ಯವಿರುವುದಿಲ್ಲ, ಪ್ರಯುಕ್ತ ಈ ಕೆಳಗಿನ ಎರಡು ಗ್ರಾಮಗಳಿಗೆ ಸ್ಮಶಾನ ಭೂಮಿ ಖರೀದಿಸುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. |

| ಕ್ರ.ಸಂ | ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|---|
| 1 | ಹೊಕ್ರಾಣಾ(ಕೆ) | 77 | 00-30 ಗುಂಟೆ |
| 2 | ನೀಡವಂಚಾ | 76 ಮತ್ತು 87 | 00-20 ಗುಂಟೆ<br>00-20 ಗುಂಟೆ |

ಸಂಖ್ಯೆ:ಕಂಇ 8 ಎಲ್‌ಜಿಐ 2021

(ಆರ್.ಅಶೋಕ್)
ಕಂದಾಯ ಸಚಿವರು



**ಕರ್ನಾಟಕ ವಿಧಾನ ಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3371 |
| ಸದಸ್ಯರ ಹೆಸರು | : | ಶ್ರೀ ಆಚಾರ್ ಹಾಲಪ್ಪ ಬಸಪ್ಪ |
| ಉತ್ತರಿಸುವ ದಿನಾಂಕ | : | 22-03-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನೂತನವಾಗಿ ರಚನೆಯಾದ ತಾಲ್ಲೂಕುಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರ ಕಛೇರಿಗಳನ್ನು ಪ್ರಾರಂಭಿಸಲಾಗಿದೆಯೇ; (ಜಿಲ್ಲಾವಾರು ವಿವರಗಳನ್ನು ನೀಡುವುದು) | ಹೊಸದಾಗಿ ರಚನೆಯಾದ ತಾಲ್ಲೂಕುಗಳಿಗೆ ಇಲಾಖಾ ಮಟ್ಟದ ಕಛೇರಿಗಳನ್ನು ಪ್ರಾರಂಭಿಸುವ ಕುರಿತು ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಹಮತಿಗಾಗಿ ಕಳುಹಿಸಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ:19-08-2019 ರಲ್ಲಿ ಪ್ರಸ್ತುತ ಪರಿಸ್ಥಿತಿಯಲ್ಲಿ ಯಾವುದೇ ಹೆಚ್ಚುವರಿ ಅನುದಾನ ನೀಡಲು ಸಾಧ್ಯವಿಲ್ಲವಾದ ಕಾರಣ ಪ್ರಸ್ತಾವನೆಯನ್ನು ಎರಡು ವರ್ಷ ಮುಂದೂಡುವಂತೆ ತಿಳಿಸಿರುತ್ತದೆ. ಆದುದರಿಂದ, ರಾಜ್ಯದ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಮುಂದೆ ಪರಿಶೀಲಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಈ ಕಛೇರಿಗೆ ಅಗತ್ಯ ಸಿಬ್ಬಂದಿಗಳನ್ನು ನೇಮಕ ಮಾಡಲಾಗಿದೆಯೇ; | |
| ಇ) | ಇಲ್ಲವಾದಲ್ಲಿ, ಸಾರ್ವಜನಿಕರಿಗೆ ಅನುಕೂಲಕರವಾಗುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | |
| ಈ) | ತಾಲ್ಲೂಕು ರಚನೆಯಾಗಿ ಇಷ್ಟು ವರ್ಷಗಳು ಗತಿಸಿದರೂ ಪೂರ್ಣ ಪ್ರಮಾಣದ ಸಿಬ್ಬಂದಿಯೊಂದಿಗೆ ಕಛೇರಿಯನ್ನು ಪ್ರಾರಂಭಿಸುವಲ್ಲಿ ಸರ್ಕಾರ ಅನುಸರಿಸುತ್ತಿರುವ ವಿಳಂಬಕ್ಕೆ ಕಾರಣವೇನು? | |

ಸಕಇ 130 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3376 |
| ಉತ್ತರಿಸುವ ದಿನಾಂಕ | 22-03-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮಸಾಲ ಜಯರಾಮ್ (ತುರುವೇಕೆರೆ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತುರುವೇಕೆರೆ ತಾಲ್ಲೂಕು ವ್ಯಾಪ್ತಿಯಲ್ಲಿ ಉಪ ನೋಂದಣಾಧಿಕಾರಿ ಕಛೇರಿಗೆ ಹೊಸದಾಗಿ ಸ್ವಂತ ಕಟ್ಟಡ ನಿರ್ಮಾಣ ಮಾಡುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ಜಿಲ್ಲಾಧಿಕಾರಿಗಳು, ತುಮಕೂರು ರವರು ತುರುವೇಕರೆ ತಾಲ್ಲೂಕು, ಕಸಬಾ ಹೋಬಳಿ, ತುರುವೇಕೆರೆ ಗ್ರಾಮದ ಸರ್ವೆ ನಂ:119ರ ಪಹಣಿಯಲ್ಲಿ ಸರ್ಕಾರಿ ಗೋಮಾಳ ಎಂದು ನಮೂದಾಗಿರುವ ಪೈಕಿ ವಿಸ್ತೀರ್ಣ 0-05 ಗುಂಟೆ ಜಮೀನನ್ನು ತುರುವೇಕೆರೆ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣದ ಉದ್ದೇಶಕ್ಕಾಗಿ ಕಾಯ್ದಿರಿಸಿ, ಹಂಚಿಕೆ ಮಾಡಿರುತ್ತಾರೆ. ಸದರಿ ಜಾಗದಲ್ಲಿ ತುರುವೇಕೆರೆ ಉಪನೋಂದಣಿ ಕಛೇರಿ ಕಟ್ಟಡ ನಿರ್ಮಿಸಲು ಜಿಲ್ಲಾನೋಂದಣಾಧಿಕಾರಿಗಳು ತುಮಕೂರುರವರು Karnataka Rural Infrastructure Development Limited (KRIDL) ರವರಿಂದ ಪಡೆದಿರುವ 1.00 ಕೋಟಿ ರೂಗಳ ಅಂದಾಜು ದರಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು. |
| ಆ) | ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು? (ವಿವರ ನೀಡುವುದು) | ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕಿನಲ್ಲಿ ಉಪನೋಂದಣಿ ಕಛೇರಿಯ ಕಟ್ಟಡ ನಿರ್ಮಾಣ ಮಾಡಲು ನೀಲಿನಕ್ಷೆ ಮತ್ತು ಅಂದಾಜು ವೆಚ್ಚಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಪ್ರಸ್ತಾವನೆಗೆ ಸಂಬಂಧಿಸಿದಂತೆ, ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಆಇ 02 ಟಿಎಫ್‌ಪಿ 2020 ದಿನಾಂಕ: 4/5/2020 ರನ್ವಯ ರಾಜ್ಯಾದ್ಯಂತ ಕೋವಿಡ್-19 ಸಾಂಕ್ರಾಮಿಕವಾಗಿ ಹಬ್ಬುತ್ತಿರುವುದರಿಂದ, ಲಾಕ್‌ಡೌನ್ ಜಾರಿಗೊಳಿಸಿದ್ದರಿಂದಾಗಿ ಆರ್ಥಿಕ ನಿರ್ಬಂಧಗಳನ್ನು ಜಾರಿಗೊಳಿಸಿರುವ ಹಿನ್ನಲೆಯಲ್ಲಿ ಹೊಸ ಯೋಜನೆಗಳಿಗೆ ಸಂಬಂಧಿಸಿದಂತೆ, ಅನುಮೋದನೆ ನೀಡುವಂತಿಲ್ಲವೆಂದು ನಿರ್ದೇಶನವಿರುವುದರಿಂದ, ಪ್ರಸಕ್ತ ಸಾಲಿನಲ್ಲಿ ಸದರಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳುವುದನ್ನು ಮುಂದೂಡಲಾಗಿರುತ್ತದೆ. |

ಸಂಖ್ಯೆ: ಕಂಇ/137/ಎಂಎನ್‌ಎಸ್‌ಎ/2021

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3376 |
| ಉತ್ತರಿಸುವ ದಿನಾಂಕ | 22-03-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮಸಾಲ ಜಯರಾಮ್ (ತುರುವೇಕೆರೆ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತುರುವೇಕೆರೆ ತಾಲ್ಲೂಕು ವ್ಯಾಪಿಯಲ್ಲಿ ಉಪ ನೋಂದಣಾಧಿಕಾರಿ ಕಛೇರಿಗೆ ಹೊಸದಾಗಿ ಸ್ವಂತ ಕಟ್ಟಡ ನಿರ್ಮಾಣ ಮಾಡುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ಜಿಲ್ಲಾಧಿಕಾರಿಗಳು, ತುಮಕೂರು ರವರು ತುರುವೇಕರೆ ತಾಲ್ಲೂಕು, ಕಸಬಾ ಹೋಬಳಿ, ತುರುವೇಕೆರೆ ಗ್ರಾಮದ ಸರ್ವೆ ನಂ:119ರ ಪಹಣಿಯಲ್ಲಿ ಸರ್ಕಾರಿ ಗೋಮಾಳ ಎಂದು ನಮೂದಾಗಿರುವ ಪೈಕಿ ವಿಸ್ತೀರ್ಣ 0-05 ಗುಂಟೆ ಜಮೀನನ್ನು ತುರುವೇಕೆರೆ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣದ ಉದ್ದೇಶಕ್ಕಾಗಿ ಕಾಯ್ದಿರಿಸಿ, ಹಂಚಿಕೆ ಮಾಡಿರುತ್ತಾರೆ. ಸದರಿ ಜಾಗದಲ್ಲಿ ತುರುವೇಕೆರೆ ಉಪನೋಂದಣಿ ಕಛೇರಿ ಕಟ್ಟಡ ನಿರ್ಮಿಸಲು ಜಿಲ್ಲಾನೋಂದಣಾಧಿಕಾರಿಗಳು ತುಮಕೂರುರವರು Karnataka Rural Infrastructure Development Limited (KRIDL) ರವರಿಂದ ಪಡೆದಿರುವ 1.00 ಕೋಟಿ ರೂಗಳ ಅಂದಾಜು ದರಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು. |
| ಆ) | ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು? (ವಿವರ ನೀಡುವುದು) | ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕಿನಲ್ಲಿ ಉಪನೋಂದಣಿ ಕಛೇರಿಯ ಕಟ್ಟಡ ನಿರ್ಮಾಣ ಮಾಡಲು ನೀಲಿನಕ್ಷೆ ಮತ್ತು ಅಂದಾಜು ವೆಚ್ಚಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಪ್ರಸ್ತಾವನೆಗೆ ಸಂಬಂಧಿಸಿದಂತೆ, ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಆಇ 02 ಟಿಎಫ್‌ಪಿ 2020 ದಿನಾಂಕ: 4/5/2020 ರನ್ವಯ ರಾಜ್ಯಾದ್ಯಂತ ಕೋವಿಡ್-19 ಸಾಂಕ್ರಾಮಿಕವಾಗಿ ಹಬ್ಬುತ್ತಿರುವುದರಿಂದ, ಲಾಕ್‌ಡೌನ್ ಜಾರಿಗೊಳಿಸಿದ್ದರಿಂದಾಗಿ ಆರ್ಥಿಕ ನಿರ್ಬಂಧಗಳನ್ನು ಜಾರಿಗೊಳಿಸಿರುವ ಹಿನ್ನಲೆಯಲ್ಲಿ ಹೊಸ ಯೋಜನೆಗಳಿಗೆ ಸಂಬಂಧಿಸಿದಂತೆ, ಅನುಮೋದನೆ ನೀಡುವಂತಿಲ್ಲವೆಂದು ನಿರ್ದೇಶನವಿರುವುದರಿಂದ, ಪ್ರಸಕ್ತ ಸಾಲಿನಲ್ಲಿ ಸದರಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳುವುದನ್ನು ಮುಂದೂಡಲಾಗಿರುತ್ತದೆ. |

ಸಂಖ್ಯೆ: ಕಂಇ/137/ಎಂಎನ್‌ಎಸ್‌ಎ/2021

(ಆರ್.ಅಶೋಕ)
ಕಂದಾಯ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 3377 |
| ಸದಸ್ಯರ ಹೆಸರು: | ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) |
| ಉತ್ತರಿಸಬೇಕಾದ ಸಚಿವರು | ಮಾನ್ಯ ಕಂದಾಯ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 22-03-2021 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಂದಾಯ ಇಲಾಖೆಯ ತಾಲ್ಲೂಕು ಮುಖ್ಯಸ್ಥರಾದ ತಹಶೀಲ್ದಾರರವರುಗಳೂ ತಾಲ್ಲೂಕಿನಲ್ಲಿ ವಾರದ ಒಂದು ದಿನ ಪ್ರತಿ ಗ್ರಾಮ ಪಂಚಾಯಿತಿ ಕೇಂದ್ರ ಅಥವಾ ಗ್ರಾಮಗಳಿಗೆ ಭೇಟಿ ನೀಡಿ ಸಾರ್ವಜನಿಕರ ಕುಂದುಕೊರತೆಗಳಿಗೆ ಪರಿಹಾರ ನೀಡುವ ಸಂಬಂಧ ಆದೇಶವನ್ನು ಹೊರಡಿಸಲು ಸರ್ಕಾರಕ್ಕಿರುವ ತೊಂದರೆಯೇನು; | ತಹಶೀಲ್ದಾರರು ತಾಲ್ಲೂಕು ವ್ಯಾಪ್ತಿಗೆ ಬರುವ ಗ್ರಾಮಗಳಿಗೆ ಪ್ರತಿ ತಿಂಗಳ 3ನೇ ಶನಿವಾರದಂದು ಭೇಟಿ ನೀಡಿ ಹಳ್ಳಿ ವಾಸ್ತವ್ಯ ಮಾಡಲು ಕೆಲವು ಜಿಲ್ಲಾಧಿಕಾರಿಗಳಿಂದ ಸುತ್ತೋಲೆ ಮೂಲಕ ಸೂಚನೆಗಳನ್ನು ನೀಡಲಾಗಿದ್ದು, ಅದರಂತೆ ತಹಶೀಲ್ದಾರರು ವಾರದ ಒಂದು ದಿನ ಪ್ರತಿ ಗ್ರಾಮ ಪಂಚಾಯಿತಿ ಕೇಂದ್ರ ಅಥವಾ ಗ್ರಾಮಗಳಿಗೆ ಭೇಟಿ ನೀಡಿ ಸಾರ್ವಜನಿಕರ ಕುಂದು ಕೊರತೆಗಳನ್ನು ಆಲಿಸಿ ಸ್ಥಾನಿಕವಾಗಿಯೇ ಪರಿಹಾರ ನೀಡಲು ಕ್ರಮ ಕೈಗೊಳ್ಳುತ್ತಿದ್ದಾರೆ. |
| ಆ) | ಇದರಿಂದ ರೈತರ ಹಲವು ಸಮಸ್ಯೆಗಳು ಸ್ಥಳದಲ್ಲಿ ಪರಿಹಾರವಾಗಿ ತಾಲ್ಲೂಕು ಕಚೇರಿಗಳಿಗೆ ಸಾರ್ವಜನಿಕರು ಅಲೆಯುವುದನ್ನು ತಪ್ಪಿಸಬಹುದಲ್ಲವೆ; | ತಹಶೀಲ್ದಾರರುಗಳು ಹಳ್ಳಿಗಳಲ್ಲಿ ವಾಸ್ತವ್ಯ ಮಾಡುತ್ತಿರುವುದರಿಂದ ಸ್ಥಳದಲ್ಲಿಯೇ ಕೆಲವು ಸಮಸ್ಯೆಗಳು ಪರಿಹಾರವಾಗುತ್ತಿವೆ. |
| ಇ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರದ ಕ್ರಮವೇನು? | ಕಡ್ಡಾಯವಾಗಿ ತಹಶೀಲ್ದಾರರು ಪ್ರತಿ ತಿಂಗಳ 3ನೇ ಶನಿವಾರ ಗ್ರಾಮ ವಾಸ್ತವ್ಯ ಕೈಗೊಂಡು ನಿಯಮಾನುಸಾರ ಸಾರ್ವಜನಿಕರ ಕುಂದು ಕೊರತೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲು ಎಲ್ಲಾ ಜಿಲ್ಲಾಧಿಕಾರಿಗಳಿಗೆ ವಿಡಿಯೋ ಕಾನ್ಫರೆನ್ಸ್ ಮೂಲಕ ಸೂಚನೆಗಳನ್ನು ನೀಡಲಾಗಿದೆ. |

ಸಂ: ಕಂಇ 25 ಎಎಸ್‌ಡಿ 2021

(ಆರ್. ಅಶೋಕ)

ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಖಾದರ್ ಯು.ಟಿ (ಮಂಗಳೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3382** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ) 2020-21 ನೇ ಸಾಲಿನಲ್ಲಿ ಮನೆ ನಿರ್ಮಾಣಕ್ಕಾಗಿ ಪ್ರತಿ ಗ್ರಾಮ ಪಂಚಾಯಿತಿಗೆ ತಲಾ 20 ರಂತೆ ಫಲಾನುಭವಿಗಳನ್ನು ಆಯ್ಕೆ ಮಾಡಿ ಕೆಲವು ತಿಂಗಳುಗಳಾಗಿದ್ದರೂ ಈ ತನಕ ಮನೆ ಮಂಜೂರಾಗದಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ ; | 2020-21 ನೇ ಸಾಲಿಗೆ ಪ್ರಧಾನ ಮಂತ್ರಿ ಅವಾಸ್ ಯೋಜನೆ(ಗ್ರಾಮೀಣ) ಅಡಿ ಪ್ರತಿ ಗ್ರಾಮ ಪಂಚಾಯಿತಿಗೆ 20 ಮನೆಗಳಂತೆ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವಂತೆ ಜಿಲ್ಲೆಗಳಿಗೆ ತಿಳಿಸಲಾಗಿರುತ್ತದೆ. ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 228 ಗ್ರಾಮ ಪಂಚಾಯತಿಗಳಿಗೆ 4,560 ಫಲಾನುಭವಿಗಳನ್ನು ಆಯ್ಕೆ ಮಾಡುವಂತೆ ತಿಳಿಸಲಾಗಿರುತ್ತದೆ.<br><br>ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ವಿಧಾನ ಸಭಾ ಕ್ಷೇತ್ರಕ್ಕೆ 960 ಮತ್ತು ಬಂಟ್ವಾಳ ವಿಧಾನ ಸಭಾ ಕ್ಷೇತ್ರಕ್ಕೆ 1333 ಹೆಚ್ಚುವರಿಯಾಗಿ ಮನೆಗಳ ಗುರಿಯನ್ನು ನೀಡಲಾಗಿದ್ದು, ಫಲಾನುಭವಿಗಳ ಆಯ್ಕೆ ಮಾಡುವಂತೆ ತಿಳಿಸಲಾಗಿದೆ. ಫಲಾನುಭವಿಗಳ ಆಯ್ಕೆಯ ಕುರಿತು ಸರ್ಕಾರ ದಿನಾಂಕ 09.11.2020 ರಂದು ಹೊರಡಿಸಿರುವ ಸುತ್ತೋಲೆಯನ್ವಯ ಬಂಟ್ವಾಳ ವಿಧಾನ ಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಾತ್ರ ಫಲಾನುಭವಿಗಳ ಪಟ್ಟಿ ನಿಗಮಕ್ಕೆ ಸಲ್ಲಿಕೆಯಾಗಿರುತ್ತದೆ. ಉಳಿದ ಗ್ರಾಮ ಪಂಚಾಯಿತಿಗಳಿಗೆ ಸಂಬಂಧಿಸಿದಂತೆ ಪಟ್ಟಿ ಸಲ್ಲಿಕೆಯಾಗಿರುವುದಿಲ್ಲ. ಸಲ್ಲಿಕೆಯಾದ ನಂತರ ಪರಿಶೀಲಿಸಲಾಗುವುದು. |
| (ಆ) | ಬಂದಿದ್ದಲ್ಲಿ ಯಾವಾಗ ಮನೆಗಳಿಗೆ ಮಂಜೂರಾತಿ ನೀಡಿ ಅನುದಾನ ಬಿಡುಗಡೆ ಮಾಡಲಾಗುವುದು ? | |

ಸಂಖ್ಯೆ :ವಇ 159 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3585 |
| ಮಾನ್ಯ ಸದಸ್ಯರ ಹೆಸರು | ಶ್ರೀಮತಿ ಲಕ್ಷ್ಮೀ ಆರ್. ಹೆಬ್ಬಾಳ್ಕರ್ |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಇಲಾಖೆ ವತಿಯಿಂದ ರಾಜ್ಯದ ನಿರುದ್ಯೋಗಿ ಯುವಕ-ಯುವತಿಯರಿಗಾಗಿ ಉಚಿತ ಬೇಕರಿ ತಯಾರಿಕೆ, ಲಘು ವಾಹನ ತರಬೇತಿ ಸೇರಿದಂತೆ ವಿವಿಧ ತರಬೇತಿಗಳನ್ನು ನೀಡಲಾಗುತ್ತಿದೆಯೇ; ಇದಕ್ಕೆ ಸಂಬಂಧಿಸಿದ ಯೋಜನೆಗಳಾವುವು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಇಲಾಖೆಯಡಿ ಬರುವ ನಿಗಮ ಮಂಡಳಿಗಳಿಂದ ಯಾವುದೇ ತರಬೇತಿ ಕಾರ್ಯಕ್ರಮವನ್ನು ನೀಡಲಾಗುತ್ತಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಈ ಯೋಜನೆಗಳಿಗಾಗಿ ಮೀಸಲಿಟ್ಟ ಅನುದಾನ ಎಷ್ಟು; ಅದರಲ್ಲಿ ಖರ್ಚಾದ ಅನುದಾನ ಎಷ್ಟು; | ಉದ್ಭವಿಸುವುದಿಲ್ಲ. |
| ಇ) | ಕಳೆದ ವರ್ಷ ಈ ಯೋಜನೆಗಳಿಂದ ಎಷ್ಟು ನಿರುದ್ಯೋಗಿಗಳು ಸದುಪಯೋಗ ಪಡೆದುಕೊಂಡಿದ್ದಾರೆ. | ಉದ್ಭವಿಸುವುದಿಲ್ಲ. |
| ಈ) | ಈ ಯೋಜನೆಗಳ ಫಲಾನುಭವಿಗಳಾಗಲು ಬೇಕಾದ ಅರ್ಹತೆ ಹಾಗೂ ಮಾನದಂಡಗಳೇನು? (ಪೂರ್ಣ ಮಾಹಿತಿಯನ್ನು ನೀಡುವುದು) | ಉದ್ಭವಿಸುವುದಿಲ್ಲ. |

ಸಂಖ್ಯೆ:ಹಿಂವಕ 227 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3402
2. ಮಾನ್ಯ ಸದಸ್ಯರ ಹೆಸರು : ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ)
3. ಉತ್ತರಿಸುವ ದಿನಾಂಕ : 23-3-2021
4. ಉತ್ತರಿಸುವ ಸಚಿವರು : ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಗಳೂರು ಮಹಾನಗರ ಪೋಲೀಸ್ ಕಮಿಷನರೇಟ್ ಕಾರ್ಯಾಲಯಕ್ಕೆ ಬೇಕಾಗುವ ಅತ್ಯಗತ್ಯ ಮೂಲಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ಸರ್ಕಾರ ಕೈಗೊಂಡ ಕ್ರಮಗಳು ಯಾವುವು; | ಮಂಗಳೂರು ಮಹಾನಗರ ಪೊಲೀಸ್ ಕಮಿಷನರೇಟ್ ಕಾರ್ಯಾಲಯವು ಸ್ವಂತ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿರುತ್ತದೆ. ಕಾರ್ಯಾಲಯಕ್ಕೆ ಬೇಕಾಗುವ ಮೂಲ ಸೌಲಭ್ಯಗಳಾದ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ವಾಹನ ನಿಲುಗಡೆಗೆ ಸ್ಥಳಾವಕಾಶ ಮತ್ತು ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯದ ವ್ಯವಸ್ಥೆಯಿರುತ್ತದೆ. |
| (ಆ) | ಪೊಲೀಸ್ ಇಲಾಖಾ ವ್ಯಾಪ್ತಿಯ ಅತಿ ಸೂಕ್ಷ್ಮ ಮತ್ತು ಸುರಕ್ಷತೆಯ ವಿವಿಧ ಮಜಲಿನಲ್ಲಿ ಚುರುಕಾಗಿ ಕಾರ್ಯನಿರ್ವಹಣೆ ಮಾಡುವಲ್ಲಿ ಆಧುನಿಕ ವ್ಯವಸ್ಥೆಗಳು ಮತ್ತು ಹೊಸ ವಾಹನಗಳೊಂದಿಗೆ, ಇಂಟರ್‌ಸೆಪ್ಟರ್ ವಾಹನಗಳು, ಮಾಬ್ ಕಂಟ್ರೋಲ್ ವಾಹನಗಳು, ಹೊಸ ಜೀಪು, ದ್ವಿಚಕ್ರವಾಹನಗಳನ್ನು ಹೊಂದಿರಬೇಕಾದುದು ಅವಶ್ಯಕವಾಗಿದ್ದು ಆ ಕುರಿತಾದ ಸುವ್ಯವಸ್ಥೆಯನ್ನು ಮಾಡುವಲ್ಲಿ ಸರ್ಕಾರದ ತುರ್ತು ಕ್ರಮಗಳೇನು; | ರಾಜ್ಯದ ಪೊಲೀಸ್ ಇಲಾಖೆಯಲ್ಲಿ ದಿನಾಂಕ:31-01-2021ರ ಅಂತ್ಯಕ್ಕೆ ಒಟ್ಟು 12594 ವಾಹನಗಳಿದ್ದು, ಅವುಗಳಲ್ಲಿ ಒಟ್ಟು 222 ಸಂಖ್ಯೆಯ ಇಂಟರ್‌ಸೆಪ್ಟರ್ ವಾಹನಗಳು, 37 ಸಂಖ್ಯೆಯ (ವಜ್ರ) ಮಾಬ್ ಕಂಟ್ರೋಲ್ ವಾಹನಗಳು, ಹಾಗೂ ಇಆರ್.ಎಸ್.ಎಸ್. ಸ್ಕಾರ್ಪಿಯೋ ವಾಹನಗಳು-239, ಹೊಯ್ಸಳ ಎರ್ಟಿಗಾ ವಾಹನ (ಬೆಂಗಳೂರು ನಗರ) - 274, ಹೈವೇ ಪಾಟ್ರೋಲ್ ಜೀಪ್- 300 ವಾಹನಗಳು ಲಭ್ಯವಿರುತ್ತವೆ. |
| (ಇ) | ಮಂಗಳೂರು ಕಮಿಷನರೇಟ್ ವ್ಯಾಪ್ತಿಯ ಗ್ರಾಮಾಂತರ ಪ್ರದೇಶಗಳು, ಘಟ್ಟ ಪ್ರದೇಶಗಳು, ನೆರೆ ರಾಜ್ಯಗಳ ಗಡಿ ಪ್ರದೇಶಗಳು, ಕರಾವಳಿ ಪ್ರದೇಶಗಳನ್ನು ಹೊಂದಿದ್ದು ಅತಿ ಸೂಕ್ಷ್ಮ ವಲಯ ಪ್ರದೇಶಗಳನ್ನು ಹೊಂದಿರುವುದರಿಂದ ಎಲ್ಲಾ ಮೂಲಸೌಲಭ್ಯಗಳನ್ನು ಒದಗಿಸಿಕೊಟ್ಟು ಕಾನೂನು ಸುವ್ಯವಸ್ಥೆಗೆ ಅನುಕೂಲ ಮಾಡಿಕೊಡುವ ಕುರಿತ ಸರ್ಕಾರದ ಕ್ರಮಗಳೇನು? | ಕಾನೂನು ಸುವ್ಯವಸ್ಥೆಗೆ ಅನುಕೂಲವಾಗುವಂತಹ ಎಲ್ಲಾ ಮೂಲಭೂತ ಸೌಲಭ್ಯಗಳಾದ ಇಲಾಖಾ ವಾಹನಗಳು, ತುರ್ತು ಸ್ಪಂದನ ವಾಹನಗಳು, ಚೆಕ್ ಪೋಸ್ಟ್ ವ್ಯವಸ್ಥೆ ಹಾಗೂ ಇನ್ನಿತರೆ ಸೌಲಭ್ಯಗಳನ್ನು ಒದಗಿಸಲಾಗಿರುತ್ತದೆ. |

**ಸಂಖ್ಯೆ:ಹೆಚ್‌ಡಿ 32 ಪಿಬಿಎಲ್ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನಾ ಸಚಿವರು

## ಕರ್ನಾಟಕ ವಿಧಾನಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3404

2] ಮಾನ್ಯ ಸದಸ್ಯರ ಹೆಸರು : ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ)

3] ಉತ್ತರಿಸುವ ದಿನಾಂಕ : 23.03.2021

4] ಉತ್ತರಿಸುವ ಸಚಿವರು : ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಂಗಳೂರು ಪೊಲೀಸ್ ಕಮಿಷನರೇಟ್ ವ್ಯಾಪ್ತಿಗೆ ಬರುವ ಮೂಡಬಿದರೆ, ಮೂಲ್ಕಿ ಮತ್ತು ಬಜಪೆ ಪೊಲೀಸ್ ಸಿಬ್ಬಂದಿ ವರ್ಗದವರಿಗೆ ಮನೆ ಬಾಡಿಗೆ ಭತ್ಯೆ ವಿಚಾರದಲ್ಲಿ ತಾರತಮ್ಯವಾಗುತ್ತಿರುವುದನ್ನು ಸರ್ಕಾರ ಗಮನಿಸಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 06 ಎಸ್‌ಆರ್‌ಪಿ 2018, ದಿನಾಂಕ: 19.04.2018 ರನ್ವಯ 05 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇರುವ ನಗರ/ ಪ್ರದೇಶಗಳನ್ನು 'ಸಿ' ವರ್ಗವೆಂದು ಪರಿಗಣಿಸಿ ಮೂಲ ವೇತನದ ಶೇ.8% ರಷ್ಟು ಮನೆ ಬಾಡಿಗೆ ಭತ್ಯೆಯನ್ನು ನಿಗದಿಪಡಿಸಲಾಗಿರುತ್ತದೆ.<br><br>ಮಂಗಳೂರು ಪೊಲೀಸ್ ಕಮೀಷನರೇಟ್ ವ್ಯಾಪ್ತಿಗೆ ಬರುವ ಮೂಡಬಿದ್ರೆ, ಮುಲ್ಕಿ ಮತ್ತು ಬಜಪೆ ಪೊಲೀಸ್ ಠಾಣೆಗಳ ಅಧಿಕಾರಿ/ ಸಿಬ್ಬಂದಿ ವರ್ಗದವರಿಗೆ ಶೇ. 8% ರಷ್ಟು ಮನೆ ಬಾಡಿಗೆ ಭತ್ಯೆ ನೀಡಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಜನರ ಸುಭದ್ರತೆ ಕಾಪಾಡುವ ಹೊಣೆಗಾರಿಕೆಯನ್ನು ನಿರ್ವಹಿಸುವ ಸದರಿ ಸಿಬ್ಬಂದಿ ವರ್ಗದವರಿಗೆ ಕಮಿಷನರೇಟ್ ವ್ಯಾಪ್ತಿಗೆ ಅನ್ವಯಿಸುವ ಭತ್ಯೆಯನ್ನು ಒದಗಿಸಿಕೊಟ್ಟ ತಾರತಮ್ಯ ನಿವಾರಿಸಲು ಸರ್ಕಾರದ ಕ್ರಮಗಳೇನು; | |
| ಇ) | ಮನೆ ಬಾಡಿಗೆ ಭತ್ಯೆಯಲ್ಲಿ ಹೆಚ್ಚಿನ ಪ್ರಮಾಣದ ವ್ಯತ್ಯಾಸ ಇರುವುದನ್ನು ಗಮನಿಸಿ ನ್ಯಾಯೋಚಿತವಾದ ಭತ್ಯೆ ಮಂಜೂರು ಮಾಡುವಲ್ಲಿ ಕಾನೂನು ನಿಯಮಗಳಡಿಯಲ್ಲಿ ಕ್ರಮ ಜರುಗಿಸಿ ಸೌಲಭ್ಯ ವಂಚಿತರಿಗೆ ಅನುಕೂಲ ಮಾಡಲಾಗುವುದೇ; | |
| ಈ) | ಮಂಗಳೂರು ಕಮಿಷನರೇಟ್ ವ್ಯಾಪ್ತಿಯ ಬಹುವಿಧ ಸುರಕ್ಷತಾ ವ್ಯವಸ್ಥೆಯನ್ನು ಹೊಂದಿರಬೇಕಾಗಿದ್ದು ಇಲ್ಲಿ ಶ್ರಮಿಸುತ್ತಿರುವ ಸಿಬ್ಬಂದಿ ವರ್ಗದವರಿಗೆ ಇಲಾಖಾ ವತಿಯಿಂದ ಎಲ್ಲಾ ಮೂಲಸೌಲಭ್ಯಗಳು ಮತ್ತಿತರ ಅವಶ್ಯಕ ಸೌಕರ್ಯಗಳನ್ನು ವ್ಯವಸ್ಥೆಗೊಳಿಸಲು ಇಲಾಖೆಯವರು ಸಕಾಲಿಕ ಕ್ರಮಗಳನ್ನು ಕೈಗೊಳ್ಳಲು ಸರ್ಕಾರದ ಕ್ರಮಗಳೇನು? | ಮಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯ ಎಲ್ಲಾ ಪೊಲೀಸ್ ಠಾಣೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ ಸಿಬ್ಬಂದಿಗಳಿಗೆ ಮೂಲಭೂತ ಸೌಕರ್ಯಗಳಾದ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ,ವಸತಿ ಗೃಹಗಳ ವ್ಯವಸ್ಥೆ ಮತ್ತು ಠಾಣೆಗಳಲ್ಲಿ ಪುರುಷ ಮತ್ತು ಮಹಿಳಾ ಸಿಬ್ಬಂದಿಗಳಿಗೆ ಪ್ರತ್ಯೇಕವಾದ ವಿಶ್ರಾಂತಿ ಗೃಹಗಳ ಹಾಗೂ ಶೌಚಾಲಯಗಳ ವ್ಯವಸ್ಥೆಯನ್ನು ಕಲ್ಪಿಸಲಾಗಿರುತ್ತದೆ. |

**ಹೆಚ್‌ಡಿ 42 ಇಎಫ್‌ಎಸ್ 2021**

[ಬಸವರಾಜ ಬೊಮ್ಮಾಯಿ]

ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3407 |
| ಸದಸ್ಯರ ಹೆಸರು | : | ಶ್ರೀ ಸುರೇಶ್ ಗೌಡ (ನಾಗಮಂಗಲ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ನಾಗಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಎಷ್ಟು ಗ್ರಾಮಗಳಲ್ಲಿ ನಿರಂತರ ಜ್ಯೋತಿ ಯೋಜನೆ ಅಳವಡಿಸಲಾಗಿದೆ; | ನಾಗಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ 538 ಗ್ರಾಮಗಳಿದ್ದು, ಇವುಗಳಲ್ಲಿ ನಿರಂತರ ಜ್ಯೋತಿ ಫೇಸ್–1 ಅಡಿಯಲ್ಲಿ 362 ಗ್ರಾಮಗಳಿಗೆ ಹಾಗೂ ಡಿ.ಡಿ.ಯು.ಜಿ.ಜೆ.ವೈ. ಅಡಿಯಲ್ಲಿ 170 ಗ್ರಾಮಗಳಿಗೆ ಒಟ್ಟು 532 ಗ್ರಾಮಗಳಿಗೆ ನಿರಂತರ ವಿದ್ಯುತ್ ಸರಬರಾಜು ನೀಡಲಾಗಿರುತ್ತದೆ. |
| ಆ) | ಈ ಕ್ಷೇತ್ರದ ಬೆಳ್ಳೂರು ಹೋಬಳಿ ವ್ಯಾಪ್ತಿಯ ಅಂಕನಹಳ್ಳಿ, ಕವಲುಗುಂದಿ, ಹೊಸೂರು, ದೊಡ್ಡಗುಣಿ, ಶಿವನಹಳ್ಳಿ, ಕತ್ರಗುಪ್ಪೆ ಗ್ರಾಮಗಳನ್ನು ನಿರಂತರ ಜ್ಯೋತಿ ಯೋಜನೆಯಿಂದ ಹೊರತು ಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳ್ಳೂರು ಹೋಬಳಿಯ ಅಂಕನಹಳ್ಳಿ, ಕವಲಗುಂದಿ, ಹೊಸೂರು, ದೊಡ್ಡಗುಣಿ, ಶಿವನಹಳ್ಳಿ, ಕತ್ರಗುಪ್ಪೆ ಗ್ರಾಮಗಳಿಗೆ ನಿರಂತರ ವಿದ್ಯುತ್ ಸಂಪರ್ಕ ಕಲ್ಪಿಸಲು ಡಿಡಿಯುಜಿಜೆವೈ ಅಡಿಯಲ್ಲಿ ಮೈಲಾರಪಟ್ಟಣ ಫೀಡರ್ ಅನ್ನು ಪ್ರಸ್ತಾಪಿಸಲಾಗಿತ್ತು. ಆದರೆ, ಯೋಜನೆಯ ಅವಧಿ ಪೂರ್ಣಗೊಂಡಿದ್ದರಿಂದ ಸದರಿ ಗ್ರಾಮಗಳಲ್ಲಿ ಯೋಜನೆಯ ಕಾಮಗಾರಿಗಳನ್ನು ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ. |
| ಇ) | ಈ ಗ್ರಾಮಗಳನ್ನು ಈ ಯೋಜನೆಯಿಂದ ಹೊರತು ಪಡಿಸಲು ಕಾರಣವೇನು; | |
| ಈ) | ಈ ಗ್ರಾಮಗಳನ್ನು ನಿರಂತರ ಜ್ಯೋತಿ ಯೋಜನೆ ವ್ಯಾಪ್ತಿಗೆ ತರಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಬೆಳ್ಳೂರು ಹೋಬಳಿಯ ಅಂಕನಹಳ್ಳಿ ಕವಲಗುಂದಿ, ಹೊಸೂರು, ದೊಡ್ಡಗುಣಿ, ಶಿವನಹಳ್ಳಿ, ಕತ್ರಗುಪ್ಪೆ ಗ್ರಾಮಗಳಿಗೆ ಹೊಸದಾಗಿ ವಡೆರಹಳ್ಳಿ ವಿದ್ಯುತ್ ಉಪಕೇಂದ್ರದಿಂದ ಹೊಸ ಫೀಡರ್ ನಿರ್ಮಿಸಲು ಅಂದಾಜುಪಟ್ಟಿ ತಯಾರಿಸಲಾಗಿರುತ್ತದೆ.<br><br>ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಶೀಘ್ರವಾಗಿ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. |

**ಸಂಖ್ಯೆ: ಎನರ್ಜಿ 116 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3408 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಸನಗೌಡ ಆರ್ ಪಾಟೀಲ್ (ಯತ್ನಾಳ್) (ವಿಜಯಪುರ ನಗರ) |
| ಉತ್ತರಿಸಬೇಕಾದ ದಿನಾಂಕ | 23-03-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಬಕಾರಿ ಇಲಾಖೆಯ ಅಧಿಕಾರಿಗಳಿಗೆ ಒಟ್ಟು ಎಷ್ಟು ವಾಹನ ಒದಗಿಸಲಾಗಿದೆ; ಅಗತ್ಯ ವಾಹನ ಸೌಲಭ್ಯವಿಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅಗತ್ಯವಿರುವಷ್ಟು ವಾಹನ ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ರಾಜ್ಯದಲ್ಲಿ ಅಬಕಾರಿ ಇಲಾಖೆಯ ಅಧಿಕಾರಿಗಳಿಗೆ ಒದಗಿಸಲಾಗಿರುವ ಒಟ್ಟು ವಾಹನಗಳ ಸಂಖ್ಯೆ 538.<br><br>ಅಗತ್ಯ ವಾಹನ ಸೌಲಭ್ಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br><br>ಅಗತ್ಯವಿರುವಷ್ಟು ವಾಹನ ಕಲ್ಪಿಸಲು ಸರ್ಕಾರವು 2019-20ನೇ ಸಾಲಿನಲ್ಲಿ 94 ವಾಹನಗಳನ್ನು ಖರೀದಿಸಿದ್ದು, 2020-21ನೇ ಸಾಲಿನಲ್ಲಿ 77 ಹೊಸ ವಾಹನಗಳನ್ನು ಖರೀದಿಸಲು ಕ್ರಮ ಕೈಗೊಂಡಿದೆ. |
| ಆ) | ಪೊಲೀಸ್ ಇಲಾಖೆಗೆ ಹೋಲಿಸಿದಲ್ಲಿ ಅಬಕಾರಿ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ವೇತನದಲ್ಲಿ ವ್ಯತ್ಯಾಸವಿರುವುದು ನಿಜವೇ; ಈ ತಾರತಮ್ಯ ಸರಿಪಡಿಸಲು ಕೈಗೊಂಡಿರುವ ಕ್ರಮಗಳೇನು; | ಹೌದು.<br><br>ಅಬಕಾರಿ ಇಲಾಖೆಯ ಕೆಲವೊಂದು ವೃಂದದ ಹುದ್ದೆಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸುವ ವೇತನ ಆಯೋಗದ 2ನೇ ಸಂಪುಟದಲ್ಲಿನ ವರದಿಯ ಪರಿಶೀಲನೆಯನ್ನು ಅಧಿಕಾರಿ ಸಮಿತಿಗೆ ವಹಿಸಲಾಗಿರುತ್ತದೆ. ಪ್ರಸ್ತುತ ಅಧಿಕಾರಿ ಸಮಿತಿಯ ವರದಿಯು ಅಂತಿಮ ಹಂತದಲ್ಲಿದ್ದು, ವರದಿಯನ್ನು ನಿರೀಕ್ಷಿಸಿದೆ. |
| ಇ) | ಅಬಕಾರಿ ಇಲಾಖೆಯ ಕಛೇರಿಗಳಿಗೆ ಸ್ವಂತ ಕಟ್ಟಡ ಕಲ್ಪಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; ಇದಕ್ಕಾಗಿ ಕಳೆದ 3 ವರ್ಷಗಳಿಂದ ಮಂಜೂರು ಮಾಡಿರುವ/ಬಿಡುಗಡೆ ಮಾಡಿರುವ ಮತ್ತು ವೆಚ್ಚ ಮಾಡಿರುವ ಹಣ ಎಷ್ಟು; | ಅಬಕಾರಿ ಇಲಾಖೆಯ ಕಛೇರಿಗಳಿಗೆ ಸ್ವಂತ ಕಟ್ಟಡ ಕಲ್ಪಿಸಲು ಅಬಕಾರಿ ಆಯುಕ್ತರು ಹಾಗೂ ಅಬಕಾರಿ ಉಪ ಆಯುಕ್ತರ ಹಂತದಲ್ಲಿ ಕಂದಾಯ ಇಲಾಖೆಗೆ/ನಗರ ಸ್ಥಳೀಯ ಸಂಸ್ಥೆಗಳಿಗೆ ನಿವೇಶನ ಹಂಚಿಕೆ ಮಾಡಲು ಕೋರಿಕೆಯನ್ನು ಸಲ್ಲಿಸಿ ನಿವೇಶನ ಪಡೆಯಲು ಕ್ರಮ ವಹಿಸಲಾಗುತ್ತಿದೆ. |

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3413 |
| ಸದಸ್ಯರ ಹೆಸರು | : | ಶ್ರೀ ಅಖಂಡ ಶ್ರೀನಿವಾಸಮೂರ್ತಿ ಆರ್. (ಪುಲಿಕೇಶಿ ನಗರ) |
| ಉತ್ತರಿಸಬೇಕಾದ ದಿನಾಂಕ | : | 23-03-2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪುಲಿಕೇಶಿನಗರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ವಾರ್ಡ್ ಸಂಖ್ಯೆ 60, ಸಗಾಯಪುರಂನಲ್ಲಿ ಜಲ ಸಂಗ್ರಹಗಾರ (GLR) ನಿರ್ಮಿಸಲು ಸ್ಥಳವನ್ನು ಬೆಂಗಳೂರು ಜಲಮಂಡಳಿಯವರು ಗುರುತಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಪುಲಿಕೇಶಿನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕುಡಿಯುವ ನೀರಿನ ಕೊರತೆಯನ್ನು ನೀಗಿಸಲು ವಾರ್ಡ್ ಸಂಖ್ಯೆ 60 ಸಗಾಯಪುರಂನಲ್ಲಿ ಜಲಸಂಗ್ರಹಗಾರ (GLR) ನಿರ್ಮಿಸಲು ಫುಟ್ಬಾಲ್ ಕ್ರೀಡಾಂಗಣದಲ್ಲಿನ ಜಾಗವನ್ನು ಬೆಂಗಳೂರು ಜಲಮಂಡಳಿಯಿಂದ ಗುರುತಿಸಲಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಈ ಕ್ಷೇತ್ರದ ಸುಮಾರು 6 ಲಕ್ಷ ಜನರಿಗೆ ಕುಡಿಯುವ ನೀರಿನ ಸಮಸ್ಯೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪುಲಿಕೇಶಿನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಾರ್ಡ್‌ಗಳಲ್ಲಿ ಕುಡಿಯುವ ನೀರಿನ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಹಾಗಿದ್ದಲ್ಲಿ, ಬದಲಿ ಜಾಗವು ಇಲ್ಲದೇ ಇರುವುದರಿಂದ, ಬೆಂಗಳೂರು ಜಲಮಂಡಳಿಯವರು ಗುರುತಿಸಿರುವ ಜಾಗವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಬಿ.ಬಿ.ಎಂ.ಪಿ ವತಿಯಿಂದ ಸದರಿ ಜಾಗವನ್ನು ಬೆಂಗಳೂರು ಜಲಮಂಡಳಿಯವರಿಗೆ ಹಸ್ತಾಂತರಿಸಲಾಗುವುದೇ? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ:60 ಸಗಾಯಪುರಂ ವಾರ್ಡ್ ಫುಟ್‌ಬಾಲ್ ಆಟದ ಮೈದಾನದಲ್ಲಿನ ಉಳಿಕೆ ಸ್ಥಳ ಸುಮಾರು 1760 ಚದರ ಮೀಟರ್ ವ್ಯಾಪ್ತಿಯ ಪ್ರದೇಶವನ್ನು ಬೆಂಗಳೂರು ನೀರು ಮತ್ತು ಒಳಚರಂಡಿ ಮಂಡಳಿಗೆ ಉಚಿತವಾಗಿ ಹಸ್ತಾಂತರಿಸುಂತೆ ಬೆಂಗಳೂರು ಜಲಮಂಡಳಿಯಿಂದ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರಿಗೆ ಕೋರಲಾಗಿರುತ್ತದೆ.<br><br>ಆದರೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಬಿ.ಬಿ.ಎಂ.ಪಿ ವ್ಯಾಪ್ತಿಗೆ ಬರುವ ಆಟದ ಮೈದಾನ ಮತ್ತು ಉದ್ಯಾನವನ ಹಾಗೂ ತೆರೆದ ಪ್ರದೇಶಗಳ (Preservation & Regulation) ಕಾಯ್ದೆ 1985 ರನ್ವಯ ಪ್ರಸ್ತಾಪಿತ ಪ್ರದೇಶವನ್ನು ನಿರ್ದಿಷ್ಟ ಉದ್ದೇಶಕ್ಕೆ ಹೊರತುಪಡಿಸಿ ಇತರೆ ಉಪಯೋಗದ ಉದ್ದೇಶಕ್ಕೆ ಪ್ರತಿಬಂಧಿಸಲಾಗಿರುವುದರಿಂದ ಬೆಂಗಳೂರು ಜಲಮಂಡಳಿಯು ಪ್ರಸ್ತಾಪಿಸಿರುವ ಉದ್ದೇಶಕ್ಕೆ ಜಾಗ ನೀಡಲು ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ವತಿಯಿಂದ ಸದರಿ ಫುಟ್‌ಬಾಲ್ ಕ್ರೀಡಾಂಗಣದ ಜಾಗದ ಬದಲಿಗೆ ಪರ್ಯಾಯ ಸ್ಥಳವನ್ನು ಉಚಿತವಾಗಿ ಹಸ್ತಾಂತರಿಸಿದಲ್ಲಿ, ಸಾರ್ವಜನಿಕರಿಗೆ ಕುಡಿಯುವ ನೀರಿನ ಸಮಸ್ಯೆಯನ್ನು ನೀಗಿಸಲು ವಾರ್ಡ್ ಸಂಖ್ಯೆ:60, ಸಗಾಯಪುರಂನಲ್ಲಿ ಜಲಸಂಗ್ರಹಗಾರ (GLR) ನಿರ್ಮಿಸಲು ತುರ್ತಾಗಿ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ನಅಇ 50 ಎಂಎನ್‌ಐ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3434 |
| 2 | ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ ಕೆ.(ಉಡುಪಿ) |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವ ಸಚಿವರು | : | ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯ ಮಣಿಪಾಲದಲ್ಲಿ ಅಗ್ನಿಶಾಮಕ ಠಾಣೆ ತೆರೆಯುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ಉಡುಪಿ ಜಿಲ್ಲೆಯ ಮಣಿಪಾಲದಲ್ಲಿ ಅಗ್ನಿಶಾಮಕ ಠಾಣೆ ಸ್ಥಾಪಿಸುವ ಕುರಿತು ಉಡುಪಿ ಜಿಲ್ಲಾಧಿಕಾರಿಯವರು ಸರ್ವೆ ನಂ.412/ಎ1 ರಲ್ಲಿ 1 ಎಕರೆ ಜಮೀನು ಮಂಜೂರು ಮಾಡಿದ್ದು, ಮಣಿಪಾಲದಲ್ಲಿ ಬೆಂಕಿ ಆಕಸ್ಮಿಕಗಳು ಸಂಭವಿಸಿದ್ದಲ್ಲಿ ಸದರಿ ಪಟ್ಟಣದಿಂದ 09 ಕಿ.ಮೀ ಅಂತರದಲ್ಲಿ ಉಡುಪಿ ಅಗ್ನಿಶಾಮಕ ಠಾಣೆ, 12 ಕಿ.ಮೀ ವ್ಯಾಪ್ತಿಯಲ್ಲಿ ಮಲ್ಪೆ ಅಗ್ನಿಶಾಮಕ ಠಾಣೆಗಳು ಕಾರ್ಯ ನಿರ್ವಹಿಸುತ್ತಿದ್ದು, ಸಮರ್ಥವಾಗಿ ಅಗ್ನಿ ಅನಾಹುತಗಳನ್ನು ನಂದಿಸುವ ಕಾರ್ಯ ನಿರ್ವಹಿಸುತ್ತಿವೆ. |
| ಆ) | ಮಣಿಪಾಲ ಭಾಗದ ಇಂಡಸ್ಟ್ರಿಯಲ್ ಏರಿಯಾದಲ್ಲಿ ಹಲವಾರು ಕಂಪನಿಗಳು, ಪ್ರಮುಖ ಆಸ್ಪತ್ರೆ, ವಿದ್ಯಾಸಂಸ್ಥೆಗಳು, ವಸತಿ ಸಮುಚ್ಚಯಗಳು ಇರುವುದರಿಂದ ಇಲ್ಲಿಗೆ ಪ್ರತ್ಯೇಕ ಅಗ್ನಿಶಾಮಕ ಠಾಣೆಯ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ) | ಉಡುಪಿ ಜಿಲ್ಲೆಯ ಮಣಿಪಾಲದಲ್ಲಿ ಪ್ರತ್ಯೇಕ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ಸರ್ಕಾರದ ನಿಲುವೇನು ? | Standing Fire Advisory Council (SFAC) ಮಾನದಂಡಗಳ ಅನುಸಾರ 40 ಕಿ.ಮೀ ವ್ಯಾಪ್ತಿಯೊಳಗೆ ಒಂದು ಅಗ್ನಿಶಾಮಕ ಠಾಣೆ ಇರಬೇಕೆಂದಿದೆ. ಆದ್ದರಿಂದ, ಸದರಿ ಪಟ್ಟಣದಲ್ಲಿ ಜನಸಂಖ್ಯೆ, ಕೈಗಾರಿಕಾ ಬೆಳವಣಿಗೆ, ಕಟ್ಟಡಗಳ ಸಂಖ್ಯೆ ಹಾಗೂ ಅಗ್ನಿ ಅನಾಹುತಗಳು, ರಕ್ಷಣಾ ಕರೆಗಳ ಆಧಾರದ ಮೇರೆಗೆ ಮುಂದಿನ ದಿನಗಳಲ್ಲಿ ಪರಿಶೀಲಿಸಲಾಗುವುದು. |

**ಸಂಖ್ಯೆ: ಒಇ 48 ಎಸ್‌ಎಫ್‌ಬಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3444

ಸದಸ್ಯರ ಹೆಸರು : ಶ್ರೀ.ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ)

ಉತ್ತರಿಸುವ ದಿನಾಂಕ : 23-03-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರಂಜಾ ಜಲಾಶಯದ ಹಿನ್ನೀರಿನಿಂದ ಎಷ್ಟು ರೈತರ ಜಮಿನು ಮುಳುಗಡೆಯಾಗಿದೆ ಹಾಗೂ ಮುಳುಗಡೆಯಾದ ರೈತರ ಜಮೀನುಗಳಿಗೆ ಸರ್ಕಾರ ಒದಗಿಸಿರುವ ಪರಿಹಾರದ ಮೊತ್ತವೆಷ್ಟು; | ಕಾರಂಜಾ ಜಲಾಶಯದ ಹಿನ್ನೀರಿನಲ್ಲಿ ಒಟ್ಟು 08 ಗ್ರಾಮಗಳು ಪೂರ್ತಿಯಾಗಿ ಹಾಗೂ 01 ಗ್ರಾಮ ಭಾಗಶ: ಮುಳುಗಡೆಯಾಗಿರುತ್ತದೆ. ಕಾರಂಜಾ ಜಲಾಶಯದ ಹಿನ್ನೀರಿನಲ್ಲಿ ರೈತರ ಭೂಮಿ ಒಟ್ಟು 16058 ಎ-05 ಗುಂ ಮುಳುಗಡೆಯಾಗಿದ್ದು. ವಿಶೇಷ ಭೂಸ್ವಾಧೀನಾಧಿಕಾರಿಗಳು ಕನೀನಿನಿ, ಕಾರಂಜಾ ಯೋಜನೆ, ಬೀದರ್ ರವರು ಮುಳುಗಡೆಯಾದ ರೈತರ 15522 ಎ-25 ಗುಂ ಜಮೀನಿಗೆ ಭೂ-ಪರಿಹಾರ ಮೊತ್ತ ರೂ.103.238 ಕೋಟಿಗಳನ್ನು ನೀಡಿರುತ್ತಾರೆ. ಉಳಿದ 535 ಎ-20 ಗುಂ ಜಮೀನುಗಾಗಿ ಭೂಸ್ವಾಧೀನ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಆ) | ಸದರಿ ಜಲಾಶಯದ ಸಂತ್ರಸ್ಥರಿಗೆ ಇದುವರೆಗೂ ಸಂಪೂರ್ಣವಾಗಿ ಪರಿಹಾರವನ್ನು ಒದಗಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಬಂದಿದ್ದಲ್ಲಿ, ಬಾಕಿ ಇರುವ ಸಂತ್ರಸ್ಥರಿಗೆ ಪರಿಹಾರವನ್ನು ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು; | |
| ಈ) | ಈ ಜಲಾಶಯದ ಸಂತ್ರಸ್ಥರ ಕಲ್ಯಾಣಕ್ಕಾಗಿ ವಿಶೇಷ ಪ್ಯಾಕೇಜನ್ನು ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಬಾಕಿ ಇರುವ ಭೂಸ್ವಾಧೀನ ಪ್ರಕ್ರಿಯೆ ಅಂತಿಮಗೊಳಿಸಿ, ನಿಯಮಾನುಸಾರ ಸೂಕ್ತ ಪರಿಹಾರ ಒದಗಿಸಲು ಕ್ರಮ ಕೈಗೊಳ್ಳಲು ಉದ್ದೇಶಿಸಲಾಗಿದೆ. |

ಸಂಖ್ಯೆ:ಜಸಂಇ 87 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3447
2. ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ )
3. ಉತ್ತರಿಸುವ ಸಚಿವರು : ಮಾನ್ಯ ಗೃಹ, ಕಾನೂನು ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು.
4. ಉತ್ತರಿಸುವ ದಿನಾಂಕ : 23.03.2021.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾನೂನು ಇಲಾಖೆಯ ವತಿಯಿಂದ ಕಾನೂನು ಪದವೀಧರ ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ಯಾವ ಯಾವ ಯೋಜನೆಗಳಿವೆ; | ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ನವನಗರ, ಹುಬ್ಬಳ್ಳಿಯಲ್ಲಿ ಎಸ್.ಸಿ.ಎಸ್.ಪಿ. / ಟಿ.ಎಸ್.ಪಿ. ಉಪಯೋಜನೆಯನ್ನು 2017-18ನೇ ಸಾಲಿನಿಂದ ಪ್ರಾರಂಭಿಸಿದ್ದು, ಸದರಿ ಯೋಜನೆಯಡಿ ಕಾನೂನು ಪದವಿಯ ಅಂತಿಮ ವರ್ಷದಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅರ್ಹ ವಿದ್ಯಾರ್ಥಿಗಳಿಗೆ ಸಮಾಜ ಕಲ್ಯಾಣ ಇಲಾಖೆಯು ಕ್ರಿಯಾಯೋಜನೆಯಲ್ಲಿ ಅನುಮೋದಿಸಿದಂತೆ, ಲ್ಯಾಪ್‌ಟಾಪ್ / ಕಾನೂನು ಪುಸ್ತಕ / ಇ-ನೋಟ್ ಪ್ಯಾಡ್ ಗಳನ್ನು ನೀಡಲಾಗುತ್ತಿದೆ. |
| ಆ) | ಸದರಿ ಯೋಜನೆಗಳಿಂದ ಕಳೆದ ಮೂರು ವರ್ಷಗಳಲ್ಲಿ ಎಷ್ಟು ವಿದ್ಯಾರ್ಥಿಗಳು ಸೌಲಭ್ಯವನ್ನು ಪಡೆದುಕೊಂಡಿರುತ್ತಾರೆ; | ಎಸ್.ಸಿ.ಎಸ್.ಪಿ. / ಟಿ.ಎಸ್.ಪಿ. ಉಪಯೋಜನೆಯಡಿ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ನವನಗರ, ಹುಬ್ಬಳ್ಳಿ ವ್ಯಾಪ್ತಿಯಲ್ಲಿ ಬರುವ ಕಾನೂನು ಕಾಲೇಜುಗಳ ಅಂತಿಮ ವರ್ಷದ ಪದವಿ ವಿದ್ಯಾರ್ಥಿಗಳಿಗೆ ಕಳೆದ 3 ವರ್ಷಗಳಿಂದ ಒದಗಿಸಲಾದ ಅನುದಾನ ಹಾಗೂ ಸದರಿ ಸೌಲಭ್ಯವನ್ನು ಪಡೆದ ವಿದ್ಯಾರ್ಥಿಗಳ ವಿವರವನ್ನು ಈ ಕೆಳಗಿನಂತೆ ನೀಡಲಾಗಿದೆ; |
| ಇ) | ಕಳೆದ ಮೂರು ವರ್ಷಗಳಲ್ಲಿ ಈ ಯೋಜನೆಗಳಿಗೆ ಒದಗಿಸಲಾಗಿರುವ ಅನುದಾನವೆಷ್ಟು ಹಾಗೂ ಎಷ್ಟು ಅನುದಾನವನ್ನು ಬಳಕೆ ಮಾಡಲಾಗಿದೆ? | |

| | ವರ್ಷ | ಒದಗಿಸಲಾದ ಅನುದಾನ (ರೂ. ಲಕ್ಷಗಳಲ್ಲಿ) | ವಿದ್ಯಾರ್ಥಿಗಳ ಸಂಖ್ಯೆ | ಸೌಲಭ್ಯದ ವಿವರ | ಷರಾ |
|---|---|---|---|---|---|
| 1 | 2017-18 | 139.00 | 309 | ಲ್ಯಾಪ್ ಟಾಪ್ | ಹಂಚಿಕೆ ಮಾಡಲಾಗಿದೆ |
| 2 | 2018-19 | 106.00 | 200 | ಲ್ಯಾಪ್ ಟಾಪ್ | ಲ್ಯಾಪ್‌ಟಾಪ್ ಖರೀದಿ ಮಾಡಲಾಗಿದೆ. ವಿತರಿಸುವ ಕಾರ್ಯ ಪ್ರಗತಿಯಲ್ಲಿದೆ. |
| 3 | 2019-20 | 65.00 | 90 | ಲ್ಯಾಪ್ ಟಾಪ್ | ಲ್ಯಾಪ್‌ಟಾಪ್ ಖರೀದಿ ಮಾಡಲಾಗಿದೆ. ವಿತರಿಸುವ ಕಾರ್ಯ ಪ್ರಗತಿಯಲ್ಲಿದೆ. |
| 4 | 2020-21 | 33.00 | ಅಂತಿಮ ವರ್ಷದ ಕಾನೂನು ಪದವಿಯಲ್ಲಿ ಒಟ್ಟು 1507 ವಿದ್ಯಾರ್ಥಿಗಳಿರುತ್ತಾರೆ. | ಇ-ನೋಟ್ ಪ್ಯಾಡ್ | ಖರೀದಿ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

ಸಂಖ್ಯೆ: ಲಾ-ಹೆಚ್‌ಆರ್‌ಎಮ್/40/2021

(ಬಸವರಾಜ ಬೊಮ್ಮಾಯಿ)
ಗೃಹ, ಕಾನೂನು ಹಾಗೂ ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಸಚಿವರು

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3494 |
| 2 | ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಖಾದರ್ ಯು.ಟಿ (ಮಂಗಳೂರು) |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವ ಸಚಿವರು | : | ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊಸದಾಗಿ ರಚನೆಯಾಗಿರುವ ಉಳ್ಳಾಲ ತಾಲ್ಲೂಕಿಗೆ ಹೊಸದಾಗಿ ಅಗ್ನಿಶಾಮಕ ಠಾಣೆ ಮಂಜೂರು ಮಾಡುವ ಉದ್ದೇಶ ಸರ್ಕಾರಕ್ಕಿದೆಯೇ; | ಉಲ್ಲಾಳ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಫಜಿಲ್/ಕೈರಂ ಮತ್ತು ಬೈಕಂಪಾಡಿ ಠಾಣೆಗಳು, ಅಗ್ನಿಶಾಮಕ ಠಾಣೆಗಳ ಸ್ಥಾಪನೆಗೆ ಇರುವ ಮಾನದಂಡಗಳನ್ನು ಪೂರೈಸುವುದಿಲ್ಲ. ಅಲ್ಲದೇ, ಸಮೀಪದಲ್ಲಿ ಸುಸಜ್ಜಿತ ಅಗ್ನಿಶಾಮಕ ಠಾಣೆಗಳು ಲಭ್ಯವಿದೆ. ಆದ್ದರಿಂದ, ಫಜಿಲ್/ಕೈರಂ ಮತ್ತು ಬೈಕಂಪಾಡಿ ಅಗ್ನಿಶಾಮಕ ಠಾಣೆಗಳ ಸ್ಥಾಪನೆ ಪ್ರಸ್ತಾವನೆಯನ್ನು ತಿರಸ್ಕರಿಸಲಾಗಿದೆ<br><br>ಆದಾಗ್ಯೂ, ಸದರಿ ಪ್ರದೇಶಗಳಲ್ಲಿ ಜನಸಂಖ್ಯೆ, ಕೈಗಾರಿಕಾ ಬೆಳವಣಿಗೆ, ಕಟ್ಟಡಗಳ ಸಂಖ್ಯೆ ಹಾಗೂ ಅಗ್ನಿ ಅನಾಹುತಗಳು, ರಕ್ಷಣಾ ಕರೆಗಳ ಆಧಾರದ ಮೇರೆಗೆ ಮುಂದಿನ ದಿನಗಳಲ್ಲಿ ಪರಿಶೀಲಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಈ ಕುರಿತು ವಿವರಗಳೇನು ? | |

ಸಂಖ್ಯೆ: ಒಇ 49 ಎಸ್ಎಫ್‌ಬಿ 2021

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಲಾಲಾಜಿ ಆರ್. ಮೆಂಡನ್ (ಕಾಪು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1377 |
| ಉತ್ತರಿಸುವ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | 2018-19, 2019-20 ಹಾಗೂ 2020-21ನೇ ಸಾಲಿನಲ್ಲಿ ಉಡುಪಿ ಜಿಲ್ಲೆಯ ವಿವಿಧ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಿವಿಧ ನಗರ ವಸತಿ ಯೋಜನೆಯಡಿ ನಿಗಧಿಪಡಿಸಲಾದ ಗುರಿ ಎಷ್ಟು; | 2018-19ನೇ ಸಾಲಿನಲ್ಲಿ ಉಡುಪಿ ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಾಜಪೇಯಿ ನಗರ ವಸತಿ ಯೋಜನೆಯಡಿ ಒಟ್ಟು 217 ಮನೆಗಳ ಗುರಿಯನ್ನು ನಿಗಧಿಪಡಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ:- |

| ನಗರ ಸ್ಥಳೀಯ ಸಂಸ್ಥೆ | ಗುರಿ |
|---|---|
| ಕಾಪು ಪುರಸಭೆ | 20 |
| ಕಾರ್ಕಳ ಪುರಸಭೆ | 26 |
| ಕುಂದಾಪುರ ಪುರಸಭೆ | 31 |
| ಸಾಲಿಗ್ರಾಮ ಪಟ್ಟಣ ಪಂಚಾಯಿತಿ | 20 |
| ಉಡುಪಿ ನಗರಸಭೆ | 120 |
| **ಒಟ್ಟು:** | **217** |

2019-20 ಹಾಗೂ 2020-21ನೇ ಸಾಲಿನಲ್ಲಿ ವಾಜಪೇಯಿ ನಗರ ವಸತಿ ಯೋಜನೆಯಡಿ ಸರ್ಕಾರದಿಂದ ಯಾವುದೇ ಹೊಸ ಮನೆಗಳ ಗುರಿಯನ್ನು ನಿಗದಿಪಡಿಸಿರುವುದಿಲ್ಲ.

ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿ ಎ.ಹೆಚ್.ಪಿ. ಘಟಕದಡಿ 2018-19, 2019-20 ಹಾಗೂ 2020-21ನೇ ಸಾಲಿನಲ್ಲಿ ಉಡುಪಿ ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಒಟ್ಟು 500 ಮನೆಗಳನ್ನು ಮತ್ತು ಬಿ.ಎಲ್.ಸಿ. ಘಟಕದಡಿ ಕೇಂದ್ರ ಸರ್ಕಾರದ ರೂ. 1.50 ಲಕ್ಷಗಳ ಸಹಾಯಧನ ಪಡೆಯಲು ಒಟ್ಟು 476 ಮನೆಗಳು ಮಂಜೂರಾಗಿವೆ. ವಿವರಗಳು ಕೆಳಕಂಡಂತಿವೆ:-

| ನಗರ ಸ್ಥಳೀಯ ಸಂಸ್ಥೆ | ಮಂಜೂರು ಮಾಡಲಾಗಿರುವ B.L.C. ಮನೆಗಳ ಸಂಖ್ಯೆ | ಮಂಜೂರು ಮಾಡಲಾಗಿರುವ A.H.P. ಮನೆಗಳ ಸಂಖ್ಯೆ | ಒಟ್ಟು |
|---|---|---|---|
| ಕಾಪು ಪುರಸಭೆ | 54 | 0 | 54 |
| ಕಾರ್ಕಳ ಪುರಸಭೆ | 62 | 0 | 62 |
| ಕುಂದಾಪುರ ಪುರಸಭೆ | 111 | 0 | 111 |
| ಸಾಲಿಗ್ರಾಮ ಪಟ್ಟಣ ಪಂಚಾಯಿತಿ | 45 | 0 | 45 |
| ಉಡುಪಿ ನಗರಸಭೆ | 204 | 500 | 704 |
| **ಒಟ್ಟು:** | **476** | **500** | **976** |

| | | |
|---|---|---|
| ಆ | ಮೇಲ್ಕಂಡ ಅವಧಿಯಲ್ಲಿ ಕಾಪು ಪುರಸಭೆ ವ್ಯಾಪ್ತಿಯಲ್ಲಿ ವಿವಿಧ ನಗರ ವಸತಿ ಯೋಜನೆಯಡಿ ಮಂಜೂರಾದ ಮನೆಗಳ ಸಂಖ್ಯೆ ಎಷ್ಟು; (ವರ್ಷವಾರು ಮಾಹಿತಿ ನೀಡುವುದು) | 2018-19ನೇ ಸಾಲಿನಲ್ಲಿ ಉಡುಪಿ ಜಿಲ್ಲೆಯ ಕಾಪು ಪುರಸಭೆ ವ್ಯಾಪ್ತಿಯಲ್ಲಿ ವಾಜಪೇಯಿ ನಗರ ವಸತಿ ಯೋಜನೆಯಡಿ 20 ಮನೆಗಳ ಗುರಿಯನ್ನು ನಿಗದಿಪಡಿಸಿದ್ದು, ಸದರಿ ಗುರಿಗೆ ಎದುರಾಗಿ ನಿಗದಿತ ಸಮಯದಲ್ಲಿ ಯಾವುದೇ ಫಲಾನುಭವಿಗಳನ್ನು ಆಯ್ಕೆ ಮಾಡಿರುವುದಿಲ್ಲ. |
| ಇ | ಈ ಪುರಸಭೆಯಲ್ಲಿ ವಿವಿಧ ಹಂತಗಳಲ್ಲಿ ಮನೆಗಳ ಪ್ರಗತಿ ಆಗಿದ್ದರೂ, ಅನುದಾನ ಬಿಡುಗಡೆ ಆಗದಿರುವ ಪ್ರಕರಣಗಳೆಷ್ಟು; (ವಿವರ ನೀಡುವುದು) | 2018-19 ರಿಂದ 2020-21 ರವರೆಗಿನ ಸಾಲಿನಲ್ಲಿ ಉಡುಪಿ ಜಿಲ್ಲೆಗೆ ವಾಜಪೇಯಿ ನಗರ ವಸತಿ ಯೋಜನೆಯಡಿ ನಿಗದಿಪಡಿಸಿದ ಗುರಿಗಳಿಗೆ ಎದುರಾಗಿ ಯಾವುದೇ ಫಲಾನುಭವಿಗಳ ಆಯ್ಕೆಯಾಗದೇ ಇರುವುದರಿಂದ, ಅನುದಾನವನ್ನು ಬಿಡುಗಡೆ ಮಾಡಲಾಗಿರುವುದಿಲ್ಲ.<br><br>ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿ ಮಂಜೂರಾದ ಮನೆಗಳಿಗೆ ಕೇಂದ್ರ ಸರ್ಕಾರದಿಂದ ಈವರೆಗೆ ಅನುದಾನ ಬಿಡುಗಡೆಯಾಗದೇ ಇರುವುದರಿಂದ, ಪ್ರಗತಿಗನುಗುಣವಾಗಿ ಫಲಾನುಭವಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲಾಗಿರುವುದಿಲ್ಲ. |
| ಈ | ಈಗಾಗಲೇ ಚಾಲ್ತಿಯಲ್ಲಿರುವ ಹಾಗೂ ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುವ ಮನೆಗಳ ಫಲಾನುಭವಿಗಳ ಖಾತೆಗೆ ಅನುದಾನ ಬಿಡುಗಡೆ ವಿಳಂಬವಾಗುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; ಇದ್ದಲ್ಲಿ ಬಾಕಿ ಅನುದಾನ ಬಿಡುಗಡೆಗೆ ಸರ್ಕಾರ ಯಾವ ಕಾಲ ಮಿತಿಯಲ್ಲಿ ಕ್ರಮ ಕೈಗೊಳ್ಳಲಾಗಿದೆ? | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ: ವಇ 54 ಹೆಚ್‌ಎಎಂ 2019, ದಿನಾಂಕ: 16.11.2019 ರಲ್ಲಿ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್. ಗೆ ಅಳವಡಿಸಿ, ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ಅರ್ಹಗೊಂಡ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br><br>ಆದರೆ, ವಿಜಿಲ್ ಆಪ್ ಮೂಲಕ ಪರಿಶೀಲಿಸಿ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಲ್ಲಿ ಆಗುತ್ತಿರುವ ವಿಳಂಬವನ್ನು ಸರ್ಕಾರವು ಗಮನಿಸಿ, ಸರ್ಕಾರದ ಆದೇಶ ಸಂಖ್ಯೆ: ವಇ 12 ಹೆಚ್‌ಎಹೆಚ್ 2020, ದಿನಾಂಕ: 01.02.2021 ಮತ್ತು 02.02.2021 ರಲ್ಲಿ ವಿಜಿಲ್ ಆಪ್ ಮೂಲಕ ಪರಿಶೀಲಿಸುವುದಕ್ಕೆ ದಿನಾಂಕ: 31.03.2021 ರವರೆಗೆ ವಿನಾಯಿತಿ ನೀಡಲಾಗಿದೆ. ಅದರಂತೆ ಪ್ರಸ್ತುತ ಫಲಾನುಭವಿಗಳಿಗೆ ಅನುದಾನ ಬಿಡುಗಡ ಮಾಡುವ ವಿಧಾನಗಳನ್ನು ಸರಳೀಕರಣಗೊಳಿಸಿ ಭೌತಿಕ ಪ್ರಗತಿಗನುಗುಣವಾಗಿ ಎಲ್ಲಾ ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. |

[ಸಂಖ್ಯೆ: ವಇ 65 ಹೆಚ್‌ಎಫ್‌ಎ 2021]

(ವಿ. ಸೋಮಣ್ಣ)
ವಸತಿ ಸಚಿವರು.

<u>ಕರ್ನಾಟಕ ವಿಧಾನಸಭೆ</u>

**1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1546**

**2. ಸದಸ್ಯರ ಹೆಸರು : ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)**

**3. ಉತ್ತರಿಸುವ ದಿನಾಂಕ : 22.03.2021**

**4. ಉತ್ತರಿಸುವ ಸಚಿವರು : ಕಂದಾಯ ಸಚಿವರು**

| | ಪ್ರಶ್ನೆ | ಉತ್ತರ |
|---|---|---|
| (ಅ) | ಬಹು ನಿರೀಕ್ಷಿತ 'ವಾಸಿಸುವವನೆ ನೆಲದೊಡೆಯ' ಎಂಬ ಕರ್ನಾಟಕ ಭೂ ಸುಧಾರಣಾ ತಿದ್ದುಪಡಿ ಕಾಯ್ದೆಗೆ ರಾಷ್ಟ್ರಪತಿಗಳ ಅಂಕಿತ ದೊರೆತಿದ್ದರೂ, ಅನುಷ್ಠಾನವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961ಕ್ಕೆ ತಿದ್ದುಪಡಿ ತಂದು ಕಲಂ 38ಎ ಅನ್ನು ಸೇರ್ಪಡೆಗೊಳಿಸಿ ವಾಸದ ಹಕ್ಕು ದಾಖಲೆಗಳನ್ನು ನೀಡುವ ಕಾರ್ಯಕ್ರಮ ಪ್ರಗತಿಯಲ್ಲಿರುತ್ತದೆ. |
| (ಆ) | ಬಂದಿದ್ದಲ್ಲಿ, ಸದರಿ ಕ್ರಾಂತಿಕಾರಿ ಕಾಯ್ದೆಯ ಅನುಷ್ಠಾನವನ್ನು ಸರ್ಕಾರವು ನಿರ್ಲಕ್ಷಿಸಲು ಕಾರಣವೇನು; | ಸರ್ಕಾರವು ನಿರ್ಲಕ್ಷಿಸಿರುವುದಿಲ್ಲ. ಮಾನ್ಯ ಮುಖ್ಯಮಂತ್ರಿಗಳು ಮಾನ್ಯ ಕಂದಾಯ ಸಚಿವರು ಹಾಗೂ ವಿವಿಧ ಹಂತದ ಅಧಿಕಾರಿಗಳು ಸದರಿ ಪ್ರಗತಿ ಕಾರ್ಯವನ್ನು ಪುನರಾವಲೋಕಿಸುತ್ತಿದ್ದಾರೆ. |
| (ಇ) | ಸದರಿ ಕಾಯ್ದೆಯನ್ವಯ ಅರ್ಹ ಫಲಾನುಭವಿಗಳಿಗೆ ತಾವು ವಾಸಿಸುತ್ತಿರುವ ನೆಲದ ಒಡೆತನವನ್ನು ನೀಡಲು ಸರ್ಕಾರವು ರೂಪಿಸಿರುವ ಮಾರ್ಗಸೂಚಿಗಳೇನು; | • ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961ರ ಕಲಂ 38ಎ ರಡಿಯಲ್ಲಿ ಅನಧಿಕೃತವಾಗಿ ನಿರ್ಮಿಸಿರುವ ವಾಸದ ಮನೆ ಹಾಗೂ ಬಳಕೆಯ ಜಾಗದ ವಿಸ್ತೀರ್ಣವನ್ನು ಸಕ್ರಮೀಕರಣಗೊಳಿಸಲು 2–ಎಫ್ ನಮೂನೆಯಲ್ಲಿ ಸಹಾಯಕ ಆಯುಕ್ತರಿಗೆ ಅರ್ಜಿ ಸಲ್ಲಿಸಬೇಕು.<br>• ಅರ್ಹ ಫಲಾನುಭವಿಗಳಿಗೆ ನಾಲ್ಕು ಸಾವಿರ ಚದರಡಿ ವಿಸ್ತೀರ್ಣದವರೆಗೆ ಜಾಗವನ್ನು ಮಂಜೂರು ಮಾಡಬಹುದು.<br>• ಅರ್ಜಿದಾರರು ಸಲ್ಲಿಸಿದ ಅರ್ಜಿ ಮತ್ತು ಅರ್ಜಿಗಳೊಂದಿಗೆ ಲಗತ್ತಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ಸಹಾಯಕ ಆಯುಕ್ತರು ಅರ್ಹ ಫಲಾನುಭವಿಗಳನ್ನು ವಾಸದ ಮನೆ ಹಾಗೂ ಬಳಕೆಯ ಜಾಗದ ಮಾಲೀಕರೆಂದು ನೋಂದಾಯಿಸುವ ಕುರಿತು ಆದೇಶ ಹೊರಡಿಸಬೇಕು.<br>• ಸಹಾಯಕ ಆಯುಕ್ತರ ಆದೇಶದ ನಂತರ 7 ದಿನಗಳವರೆಗೆ ಅರ್ಜಿದಾರರ ವಿರುದ್ಧ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗದಿದ್ದಲ್ಲಿ, ತಹಶೀಲ್ದಾರ್ ರವರು 2–ಎಲ್ ನಮೂನೆಯಲ್ಲಿ ವಾಸದ ಮನೆ ಹಾಗೂ ಬಳಕೆಯ ಜಾಗಕ್ಕೆ ಫಲಾನುಭವಿಗಳಿಗೆ ಹಕ್ಕುಪತ್ರ ನೀಡುತ್ತಾರೆ.<br>• ಮಂಜೂರಾದ ವಾಸದ ಮನೆ ಹಾಗೂ ಬಳಕೆಯ ಜಾಗವನ್ನು ಹಕ್ಕುಪತ್ರ ಪಡೆದ ದಿನಾಂಕದಿಂದ 15 ವರ್ಷಗಳವರೆಗೆ ಮಾರಾಟ, ದಾನ, ವಿನಿಮಯ, ಭೋಗ್ಯ ಮತ್ತು ಅಡಮಾನದ ಮೂಲಕ ಪರಭಾರೆ ಮಾಡುವಂತಿಲ್ಲ. |

| | | |
|---|---|---|
| (ಈ) | ಸದರಿ ಕಾಯ್ದೆಯ ತ್ವರಿತ ಅನುಷ್ಠಾನಕ್ಕೆ ಸರ್ಕಾರವು ಕೈಗೊಳ್ಳಲಿರುವ ಕ್ರಮಗಳೇನು? | • ಮಾನ್ಯ ಮುಖ್ಯಮಂತ್ರಿಗಳು ಸದರಿ ಕಾರ್ಯಕ್ರಮದ ಪ್ರಗತಿಯ ಕುರಿತು ಅವಲೋಕಿಸಿ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಿರುತ್ತಾರೆ.<br>• ಅದೇ ರೀತಿ ಮಾನ್ಯ ಕಂದಾಯ ಸಚಿವರು ಸಹ ವಿಡಿಯೋ ಸಂವಾದದ ಮೂಲಕ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಶೀಘ್ರವಾಗಿ ಪ್ರಗತಿ ಸಾಧಿಸಲು ಸೂಚನೆ ನೀಡಿರುತ್ತಾರೆ.<br>• ಕಂದಾಯ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳು ಸಹ ಈ ಕುರಿತು ಬಾಕಿ ಪ್ರಕರಣಗಳನ್ನು ತ್ವರಿತವಾಗಿ ಇತ್ಯರ್ಥಪಡಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚಿಸಿರುತ್ತಾರೆ. |

**ಸಂಖ್ಯೆ: ಆರ್‌ಡಿ 10 ಎಲ್‌ಆರ್‌ಎಸ್ 2021**

**(ಆರ್.ಅಶೋಕ)**
**ಮಾನ್ಯ ಕಂದಾಯ ಸಚಿವರು.**

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಾಘವೇಂದ್ರ ಬಸವರಾಜ್ ಹಿಟ್ನಾಳ್.ಕೆ (ಕೊಪ್ಪಳ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1550** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಮೂರು ವರ್ಷಗಳಿಂದ ಕೊಪ್ಪಳ ವಿಧಾನ ಸಭಾ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಯಡಿ ಮಂಜೂರಾಗಿರುವ ಮನೆಗಳು ಎಷ್ಟು ; | 2017-2018 ರಿಂದ ಇಲ್ಲಿಯವರೆಗೆ ಕೊಪ್ಪಳ ವಿಧಾನಸಭಾ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಯಡಿ **24034** ಮನೆಗಳನ್ನು ಮಂಜೂರು ಮಾಡಲಾಗಿದೆ. ಯೋಜನಾವಾರು ವಿವರ ಕೆಳಕಂಡಂತಿದೆ. |
| (ಆ) | ಕಳೆದ ಮೂರು ವರ್ಷಗಳಿಂದ ಈ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಗಳಿಗೆ ಬಿಡುಗಡೆಯಾದ ಹಾಗೂ ಬಾಕಿ ಇರುವ ಅನುದಾನ ಎಷ್ಟು ; (ಯೋಜನಾವಾರು ಅನುದಾನದ ವಿವರ ನೀಡುವುದು) | 2017-2018 ನೇ ಸಾಲಿನಿಂದ ಈವರೆಗೆ ಕೊಪ್ಪಳ ವಿಧಾನಸಭಾ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಯಡಿ ಮಂಜೂರಾಗಿರುವ ಮನೆಗಳಿಗೆ ಭೌತಿಕ ಪ್ರಗತಿಗೆ ಅನುಗುಣವಾಗಿ ಅರ್ಹ ಫಲಾನುಭವಿಗಳ ಖಾತೆಗೆ ರೂ.29.77 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಯೋಜನಾವಾರು ವಿವರ ಈ ಕೆಳಕಂಡಂತಿದೆ. |
| (ಇ) | ಅನುದಾನವನ್ನು ತಡೆಹಿಡಿಯಲು ಕಾರಣವೇನು ; | |
| (ಈ) | ತಡೆಹಿಡಿದಿರುವ ಅನುದಾನವನ್ನು ಯಾವ ಕಾಲಾಮಿತಿಯೊಳಗೆ ಬಿಡುಗಡೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದು ? | |

| ಯೋಜನೆ | ಮಂಜೂರಾದ ಮನೆಗಳು |
|---|---|
| ಬಸವ ವಸತಿ ಯೋಜನೆ | 7956 |
| ಡಾ.ಬಿ.ಆರ್ ಅಂಬೇಡ್ಕರ್ ನಿವಾಸ್ (ಗ್ರಾಮೀಣ & ನಗರ) | 6178 |
| ವಾಜಪೇಯಿ ನಗರ ವಸತಿ ಯೋಜನೆ (ನಗರ) | 1555 |
| ದೇವರಾಜ್ ಅರಸು ವಸತಿ ಯೋಜನೆ (ಗ್ರಾಮೀಣ & ನಗರ) | 776 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 3832 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 3737 |
| **ಒಟ್ಟು** | **24034** |

(ರೂ.ಕೋಟಿಗಳಲ್ಲಿ)

| ಯೋಜನೆ | ಮೊತ್ತ |
|---|---|
| ಬಸವ ವಸತಿ ಯೋಜನೆ | 9.59 |
| ಡಾ.ಬಿ.ಆರ್ ಅಂಬೇಡ್ಕರ್ ನಿವಾಸ್ (ಗ್ರಾಮೀಣ & ನಗರ) | 12.27 |
| ವಾಜಪೇಯಿ ನಗರ ವಸತಿ ಯೋಜನೆ (ನಗರ) | 3.88 |
| ದೇವರಾಜ್ ಅರಸು ವಸತಿ ಯೋಜನೆ (ಗ್ರಾಮೀಣ & ನಗರ) | 1.07 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 1.80 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) | 1.16 |
| **ಒಟ್ಟು** | **29.77** |

| | | |
|---|---|---|
| | | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳ ಪೈಕಿ ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಮನೆಗಳಲ್ಲಿ ಅನರ್ಹ ಫಲಾನುಭವಿಗಳ ಆಯ್ಕೆ ಕಂಡುಬಂದಿರುವುದರಿಂದ ಸರ್ಕಾರವು ವಿವಿಧ ವಸತಿ ಯೋಜನೆಗಳಡಿ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ: ವಇ 54 ಹೆಚ್‌ಎಎಂ 2019, ದಿನಾಂಕ:16.11.2019 ರಲ್ಲಿ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾಪಂಚಾಯತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ ಅರ್ಹಗೊಂಡ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br><br>ವಿಜಿಲ್ ಆಪ್ ಮೂಲಕ ಪರಿಶೀಲಿಸಿ, ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಲ್ಲಿ ಆಗುತ್ತಿರುವ ವಿಳಂಬವನ್ನು ಗಮನಿಸಿ ಸರ್ಕಾರವು ಆದೇಶ ಸಂಖ್ಯೆ:ವಇ 12 ಹೆಚ್‌ಎಹೆಚ್ 2020, ದಿನಾಂಕ:01.02.2021 & 02.02.2021 ರಲ್ಲಿ ವಿಜಿಲ್ ಆಪ್ ಮೂಲಕ ಪರಿಶೀಲಿಸುವುದಕ್ಕೆ ದಿನಾಂಕ :31.03.2021 ರವರಗೆ ವಿನಾಯಿತಿ ನೀಡಲಾಗಿದ್ದು, ಅದರಂತೆ ಪ್ರಸ್ತುತ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವ ವಿಧಾನಗಳನ್ನು ಸರಳೀಕರಣಗೊಳಿಸಿ ಭೌತಿಕ ಪ್ರಗತಿಗನುಗುಣವಾಗಿ ಎಲ್ಲಾ ಅರ್ಹ ಫಲಾನುಭವಿಗಳಿಗೆ ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ :ವಇ 139 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** :: **2026**
**ಸದಸ್ಯರ ಹೆಸರು** :: ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ)
**ಉತ್ತರಿಸುವ ದಿನಾಂಕ** :: **22.03.2021**
**ಉತ್ತರಿಸುವ ಸಚಿವರು** :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ತುಮಕೂರು ತಾಲ್ಲೂಕಿಗೆ ಬಗರ್‌ಹುಕುಂ ಸಮಿತಿಯನ್ನು ರಚಿಸಲು ಅನುಮೋದನೆ ನೀಡದಿರಲು ಕಾರಣವೇನು; | ತುಮಕೂರು ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ರಚಿಸಿ ಅಧಿಸೂಚನೆ ಸಂಖ್ಯೆ:ಆರ್‌ಡಿ 11 ಎಲ್‌ಜಿಟಿ 2020ನ್ನು ದಿನಾಂಕ:08.03.2021ರಂದು ಹೊರಡಿಸಲಾಗಿದೆ. (ಪ್ರತಿ ಲಗತ್ತಿಸಿದೆ). |
| ಆ) | ಸದರಿ ಸಮಿತಿ ರಚಿಸಲು ಇನ್ನೂ ಎಷ್ಟು ಕಾಲಾವಕಾಶದ ಅವಶ್ಯಕತೆ ಇದೆ; | |
| ಇ) | ಈ ಸಮಿತಿಯನ್ನು ರಚಿಸಲು ಕಡತ ಸಲ್ಲಿಕೆಯಾಗಿದೆಯೇ; ಯಾವಾಗ ಸಲ್ಲಿಕೆಯಾಗಿದೆ; ಹಾಗಿದ್ದಲ್ಲಿ, ವಿಲೇವಾರಿ ಮಾಡಲು ಇರುವ ತೊಂದರೆಗಳೇನು; | |
| ಈ) | ಸಾರ್ವಜನಿಕರು ಮತ್ತು ರೈತರಿಗೆ ಅನುಕೂಲವಾಗಲು ಯಾವಾಗ ಬಗರ್‌ಹುಕುಂ ಸಮಿತಿಗೆ ಸರ್ಕಾರ ಅನುಮೋದನೆ ನೀಡಲಿದೆ? | |

**ಸಂಖ್ಯೆ: ಆರ್‌ಡಿ 16 ಎಲ್‌ಜಿಟಿ 2021**

(ಆರ್.ಅಶೋಕ್)
ಕಂದಾಯ ಸಚಿವರು

ಕರ್ನಾಟಕ
ಸರ್ಕಾರ

ಸಂಖ್ಯೆ:ಆರ್ ಡಿ 11 ಎಲ್‌ಜಿಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:08.03.2021

**ಅಧಿಸೂಚನೆ**

ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಪ್ರಕರಣ 94ಎ(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತುಮಕೂರು ಜಿಲ್ಲೆಯ, ತುಮಕೂರು ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ರಚಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ/ ಮೀಸಲಾತಿ ವರ್ಗ |
|---|---|---|
| 1. | ಶ್ರೀ ಗೌರಿಶಂಕರ್ ಡಿ.ಸಿ., ಮಾನ್ಯ ಶಾಸಕರು, ತುಮಕೂರು ಗ್ರಾಮಾಂತರ, ವಿಧಾನ ಸಭಾ ಕ್ಷೇತ್ರ, ತುಮಕೂರು ಜಿಲ್ಲೆ. | ಅಧ್ಯಕ್ಷರು |
| 2. | ಶ್ರೀ ರಘುನಾಥ್ ಡಿ.ಎಸ್. ತಂದೆ ಶೇಷಪ್ಪ, ದೊಡ್ಡನಾರಮಂಗಲ, ಬೆಳ್ಳಾವಿ ಹೋಬಳಿ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ . | ಸದಸ್ಯರು (ಸಾಮಾನ್ಯ) |
| 3. | ಶ್ರೀ ನಟರಾಜ ಎನ್.ತಂದೆ ಲಿಂಗಪ್ಪ, ನೆಲಹಾಳ್, ಬೆಳ್ಳಾವಿ ಹೋಬಳಿ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. | ಸದಸ್ಯರು (ಪರಿಶಿಷ್ಟ ಪಂಗಡ) |
| 4. | ಶ್ರೀಮತಿ ಚಂದ್ರಕಲಾ ಹೆಚ್.ಪಿ. ಕೋಂ.ಎಂ.ಪಿ. ಗುರುರಾಜ್, ಹೊನ್ನುಡಿಕೆ ಗ್ರಾಮ, ಗೂಳೂರು ಹೋಬಳಿ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. | ಸದಸ್ಯರು (ಮಹಿಳೆ) |
| 5. | ಸಂಬಂಧಪಟ್ಟ ತಾಲ್ಲೂಕಿನ ತಹಶೀಲ್ದಾರ್ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

8/3/21
(ಎಂ.ಇ.ಚನ್ನಬಸವರಾಜ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ-3).

ಇವರಿಗೆ: ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ಇವರಿಗೆ - ಇದನ್ನು ರಾಜ್ಯಪತ್ರದ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ, ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಇವರಿಗೆ ಒದಗಿಸಲು ಕೋರಿದೆ.

ಪ್ರತಿ

1. ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.
2. ತಹಶೀಲ್ದಾರ್, ತುಮಕೂರು ಗ್ರಾಮಾಂತರ ತಾಲ್ಲೂಕು, ತುಮಕೂರು ಜಿಲ್ಲೆ.
3. ಅಧ್ಯಕ್ಷರು ಮತ್ತು ಸದಸ್ಯರು (ತಹಶೀಲ್ದಾರರ ಮುಖಾಂತರ)
4. ಮಾನ್ಯ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
5. ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
6. ರಕ್ಷಾ ಕಡತ/ಹೆಚ್ಚುವರಿ ಪ್ರತಿ.

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ (ಬೈಂದೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **2174** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 3 ವರ್ಷಗಳಲ್ಲಿ ಉಡುಪಿ ಜಿಲ್ಲೆಯಲ್ಲಿ ಹಂಚಿಕೆ ಮಾಡಿದ ನಿವೇಶನಗಳ ಸಂಖ್ಯೆ ಎಷ್ಟು; (ಗ್ರಾಮ ಪಂಚಾಯತ್ ವಾರು ಮಾಹಿತಿ ಒದಗಿಸುವುದು) | 2017-18, 2018-19 ಹಾಗೂ 2019-20ನೇ ಸಾಲುಗಳಲ್ಲಿ ಜಿಲ್ಲಾಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯನ್ನಾಧರಿಸಿ ಉಡುಪಿ ಜಿಲ್ಲೆಗೆ ಒಟ್ಟು 296 ನಿವೇಶನ ಹಕ್ಕುಪತ್ರಗಳನ್ನು ರಾಜೀವ್ ಗಾಂಧಿ ವಸತಿ ನಿಗಮದಿಂದ ನೀಡಲಾಗಿದೆ.<br><br>ಗ್ರಾಮ ಪಂಚಾಯಿತಿವಾರು ವಿವರ ಅನುಬಂಧ ದಲ್ಲಿ ಒದಗಿಸಲಾಗಿದೆ. |
| (ಆ) | ಈ ನಿವೇಶನಗಳ ಫಲಾನುಭವಿಗಳು ಮನೆ ನಿರ್ಮಿಸಲು ವಸತಿ ಯೋಜನೆಯಡಿ ಮನೆ ಮಂಜೂರು ಮಾಡಲಾಗಿದೆಯೇ; | ಹೌದು. ಜಿಲ್ಲಾಧಿಕಾರಿಗಳ ಕಚೇರಿಯಿಂದ ಪಡೆದ ಮಾಹಿತಿಯ ರೀತ್ಯಾ ಕಳೆದ ಮೂರು ವರ್ಷಗಳಲ್ಲಿ ನಿವೇಶನ ಮಂಜೂರಾದ ಫಲಾನುಭವಿಗಳ ಪೈಕಿ 08 ಫಲಾನುಭವಿಗಳಿಗೆ ವಿವಿಧ ವಸತಿ ಯೋಜನೆಗಳಡಿ ಮನೆ ಮಂಜೂರು ಮಾಡಲಾಗಿರುತ್ತದೆ. |
| (ಇ) | ಬೈಂದೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಈ ಹಿಂದೆ ನಿವೇಶನ ಪಡೆದ ಫಲಾನುಭವಿಗಳಿಗೆ ವಸತಿ ಯೋಜನೆಯಡಿ ಮನೆ ಹಂಚಿಕೆಯಾಗದೇ ಇರುವುದರಿಂದ ಸದರಿ ನಿವೇಶನದಲ್ಲಿ ಮನೆ ನಿರ್ಮಿಸದೇ ಪಾಳು ಬಿದ್ದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಿವೇಶನ ಪಡೆದ ಫಲಾನುಭವಿಗಳಿಗೆ ವಿವಿಧ ವಸತಿ ಯೋಜನೆಗಳಡಿ ನೀಡಲಾಗುವ ಮನೆಗಳ ಗುರಿಯಲ್ಲಿ ಆದ್ಯತೆ ಮೇರೆಗೆ ಪರಿಗಣಿಸಲು ತಿಳಿಸಲಾಗಿದೆ. ಅದಾಗ್ಯೂ ಕೆಲವು ನಿವೇಶನಗಳಲ್ಲಿ ಮನೆಗಳನ್ನು ನಿರ್ಮಿಸದೇ ಖಾಲಿ ಬಿಟ್ಟಿರುವುದು ತಿಳಿದು ಬಂದಿರುತ್ತದೆ.<br><br>ಮುಂಬರುವ ಸಾಲುಗಳಲ್ಲಿ ನೀಡಲಾಗುವ ಗುರಿಯ ಮಿತಿಯಲ್ಲಿ ಸದರಿ ಫಲಾನುಭವಿಗಳನ್ನು ಪ್ರಥಮ ಆದ್ಯತೆ ನೀಡಿ ಹಂತ ಹಂತವಾಗಿ ವಸತಿ ಸೌಕರ್ಯ ಒದಗಿಸಲು ಕ್ರಮ ವಹಿಸಲಾಗುತ್ತಿದೆ. |
| (ಈ) | ಬಂದಿದ್ದಲ್ಲಿ, ನಿವೇಶನ ಪಡೆದ ಫಲಾನುಭವಿಗಳಿಗೆ ಈ ಹಿಂದೆ ಇರುವ ಗುಂಪು ಮನೆ ಯೋಜನೆಯಡಿ ಮನೆ ಮಂಜೂರಾತಿ ಮಾಡುವ ಯೋಜನೆ ಸರ್ಕಾರದ ಮುಂದಿದೆಯೇ? | |

ಸಂಖ್ಯೆ :ವಇ 140 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

Annexure-1

LAQ-2174

| ಜಿಲ್ಲೆ | ತಾಲ್ಲೂಕು | ಗ್ರಾಮ ಪಂಚಾಯಿತಿ | ಶ್ರೇಣಿ | ಹಂಚಿಕೆ ಮಾಡಲಾದ ನಿವೇಶನಗಳು |
|---|---|---|---|---|
| Udupi | Karkala | Belman | 2017-2018 | 25 |
| Udupi | Karkala | Durga | 2017-2018 | 12 |
| Udupi | Karkala | Idu | 2017-2018 | 30 |
| Udupi | Karkala | Kuchchuru | 2017-2018 | 7 |
| Udupi | Karkala | Kuchchuru | 2017-2018 | 20 |
| Udupi | Karkala | Mundkoor | 2017-2018 | 20 |
| Udupi | Karkala | Palli | 2017-2018 | 43 |
| Udupi | Karkala | Bailuru | 2018-2019 | 7 |
| Udupi | Karkala | Bailuru | 2018-2019 | 1 |
| | **Karkala** | | | **165** |
| Udupi | Kundapura | Kambadakone | 2017-2018 | 1 |
| Udupi | Kundapura | Madamakki | 2017-2018 | 19 |
| Udupi | Kundapura | Ajri | 2017-2018 | 30 |
| Udupi | Kundapura | Kandavara | 2018-2019 | 1 |
| Udupi | Kundapura | Kumbhashi | 2018-2019 | 3 |
| Udupi | Kundapura | Kalavara | 2018-2019 | 7 |
| Udupi | Kundapura | Madamakki | 2018-2019 | 2 |
| Udupi | Kundapura | Kalavara | 2019-2020 | 1 |
| Udupi | Kundapura | Thrasi | 2019-2020 | 12 |
| Udupi | Kundapura | Thrasi | 2019-2020 | 11 |
| | **Kundapura** | | | **87** |
| Udupi | Udupi | Thenka | 2017-2018 | 2 |
| Udupi | Udupi | Vaddarse | 2017-2018 | 7 |
| Udupi | Udupi | Billadi | 2018-2019 | 6 |
| Udupi | Udupi | Cherkadi | 2018-2019 | 13 |
| Udupi | Udupi | Aatradi | 2019-2020 | 16 |
| | **Udupi** | | | **44** |
| | **Grand Total** | | | **296** |



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2671
ಸದಸ್ಯರ ಹೆಸರು : ಶ್ರೀ ಪ್ರಿಯಾಂಕ್ ಎಂ.ಖರ್ಗೆ
ಉತ್ತರಿಸುವ ದಿನಾಂಕ : 22/03/2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2018-19ನೇ ಸಾಲಿನಲ್ಲಿ ಸರ್ಕಾರದ ವತಿಯಿಂದ ದೇಶದಲ್ಲೇ ಅತಿ ದೊಡ್ಡ ಸಂವಿಧಾನ ಮ್ಯೂಸಿಯಂನ್ನು ಯಲಹಂಕದಲ್ಲಿ ನಿರ್ಮಾಣ ಮಾಡುವ ಯೋಜನೆಯ ಪ್ರಗತಿ ಯಾವ ಹಂತದಲ್ಲಿದೆ; | 1) 2019-20ನೇ ಸಾಲಿನ ಆಯವ್ಯಯ ಘೋಷಣೆಯ ಕಂಡಿಕೆ-166 ರಲ್ಲಿ ಸಂವಿಧಾನ ರಚನೆಯ ಇತಿಹಾಸ, ಸಂವಿಧಾನದ ಮಹತ್ವವನ್ನು ಮುಂದಿನ ಪೀಳಿಗೆಗೆ ಪರಿಚಯಿಸುವ ಬೃಹತ್ ಮಟ್ಟದ ಸಂವಿಧಾನ ಮ್ಯೂಸಿಯಂನ್ನು ಬೆಂಗಳೂರು ನಗರದಲ್ಲಿ ಸ್ಥಾಪಿಸಲಾಗುವುದು. ಈ ಉದ್ದೇಶಕ್ಕಾಗಿ ರೂ.20.00 ಕೋಟಿ ಅನುದಾನವನ್ನು ಒದಗಿಸಲಾಗಿದೆ.<br><br>2) ಈ ಸಂಬಂಧವಾಗಿ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರು ದಿನಾಂಕ:01-02-2019 ರಲ್ಲಿ ಯಲಹಂಕ ತಾಲ್ಲೂಕು, ನಾಗದಾಸನಹಳ್ಳಿ ಗ್ರಾಮದ ಸರ್ವೇ ನಂ-11 ರಲ್ಲಿ 8 ಎಕರೆ ವಿಸ್ತೀರ್ಣದ ಜಮೀನನ್ನು ಮಂಜೂರು ಮಾಡಲಾಗಿರುತ್ತದೆ.<br><br>3) ಸದರಿ ಸ.ನಂ 11 ರಲ್ಲಿ 19-22 ಎ/ಗು ಜಮೀನಿನ ಹಕ್ಕು ದಾಖಲೆಯ ನೈಜತೆಯ ಕುರಿತು ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಕಲಂ 136(3) ಮತ್ತು 67(2) ರಡಿ ವಿಶೇಷ ಜಿಲ್ಲಾಧಿಕಾರಿಗಳು-1, ಬೆಂಗಳೂರು ಉತ್ತರ ಉಪ ವಿಭಾಗ, ಬೆಂಗಳೂರು ರವರ ನ್ಯಾಯಾಲಯದಲ್ಲಿ ಪ್ರಕರಣ ಸಂ: ಆರ್.ಆರ್.ಟಿ(1) ಎನ್(ಎ).ಸಿ.ಆರ್:87/10-11 c/w 01,02,03,04,05 & 102-15-16 ರಲ್ಲಿ ದಾಖಲಾಗಿರುತ್ತದೆ. ಪ್ರಕರಣವು ವಿಚಾರಣೆಯಲ್ಲಿರುತ್ತದೆ.<br><br>4) ಸರ್ಕಾರದ ಆದೇಶ ಸಂ: ಸಕಇ-220: ಎಸ್.ಎಲ್.ಪಿ-2018, ದಿನಾಂಕ:06-03-2018 ರಲ್ಲಿ ಬಾಬಾ ಸಾಹೇಬ್ ಡಾ:ಬಿ.ಆರ್.ಅಂಬೇಡ್ಕರ್ ಸಂವಿಧಾನ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುವ ಸಂಬಂಧವಾಗಿ ತಾಂತ್ರಿಕ ಪರಿಣತಿ ಹೊಂದಿರುವ ಸಿಬ್ಬಂದಿಗಳ ಸೇವೆಯನ್ನು ಕಿಯೋನಿಕ್ಸ್ ಸಂಸ್ಥೆಯ ಎಂಪ್ಯಾನಲ್‌ಮೆಂಟ್ ಹೊಂದಿರುವ Ernst & young LLP ರವರ ಮೂಲಕ 6 ತಿಂಗಳ ಅವಧಿಗೆ ರೂ.58,37,048/- (ತೆರಿಗೆ ಮೊತ್ತವನ್ನು ಹೊರತುಪಡಿಸಿ) ಗಳ ವೆಚ್ಚದಲ್ಲಿ ಪಡೆಯಲು ಆದೇಶಿಸಲಾಗಿರುತ್ತದೆ. ಅದರನ್ವಯ, ಸದರಿ Ernst & young LLP ರವರೊಂದಿಗೆ ದಿ:24-05-2019 ರಂದು ಒಡಂಬಡಿಕೆಯನ್ನು ಮಾಡಿಕೊಳ್ಳಲಾಗಿರುತ್ತದೆ. |
| ಆ) | ಈ ಯೋಜನೆಯು ಪ್ರಗತಿ ಕಾಣದಿದ್ದಲ್ಲಿ, ಕಾರಣವೇನು; ಯಾವಾಗ ಈ ಯೋಜನೆಯನ್ನು ಪೂರ್ಣಗೊಳಿಸಲಾಗುವುದು? | |

| | | |
|---|---|---|
| | | 5) ಅದರನ್ವಯ, Ernst & young LLP ಸಂಸ್ಥೆಯ ವತಿಯಿಂದ ಡಾ:ಬಿ.ಆರ್.ಅಂಬೇಡ್ಕರ್ ಸಂವಿಧಾನ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುವ ಸಂಬಂಧವಾಗಿ ಅಂತಿಮ ವರದಿಯನ್ನು ಸಲ್ಲಿಸಿರುತ್ತಾರೆ.<br><br>6) ಈ ಸಂಬಂಧವಾಗಿ ದಿ:01-02-2021ರಂದು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸಭೆಯನ್ನು ಜರುಗಿಸಿ, ವರದಿಯಲ್ಲಿನ ಅಂಶಗಳ ಬಗ್ಗೆ ಚರ್ಚಿಸಲಾಗಿರುತ್ತದೆ. ಮುಂದುವರೆದು, ಸದರಿ ವರದಿಯನ್ನು ಅಂತಿಮಗೊಳಿಸುವ ಬಗ್ಗೆ ಸರ್ಕಾರದಲ್ಲಿ ಪರಿಶೀಲನೆಯಲ್ಲಿದೆ.<br><br>7) ಸದರಿ ಕಾರ್ಯಕ್ರಮದ ಅನುಷ್ಠಾನ ಸಂಬಂಧವಾಗಿ 2019-20 ನೇ ಸಾಲಿನ ಪರಿಶಿಷ್ಟ ಜಾತಿಯ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕ ಶೀರ್ಷಿಕೆ 4225-01-796-0-01 ರಡಿ ಒದಗಿಸಲಾಗಿದ್ದ ರೂ.2000.00 ಲಕ್ಷಗಳನ್ನು ಸರ್ಕಾರದ ಆದೇಶ ಸಂ: ಸಕಇ-49: ಎಸ್‌ಎಲ್‌ಪಿ-2019, ದಿ:26-08-2019 ರಲ್ಲಿ ಡಾ:ಬಿ.ಆರ್.ಅಂಬೇಡ್ಕರ್ ಸ್ಕೂಲ್ ಆಫ್ ಎಕನಾಮಿಕ್ಸ್ ಕಾರ್ಯಕ್ರಮಕ್ಕೆ ಮರು ಹಂಚಿಕೆ ಮಾಡಲಾಗಿರುತ್ತದೆ. |

ಸಕಇ 127 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2675 |
| ಮಾನ್ಯ ಸದಸ್ಯರ ಹೆಸರು | ಶ್ರೀ ಪುಟ್ಟರಂಗಶೆಟ್ಟಿ .ಸಿ (ಚಾಮರಾಜನಗರ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ಸಮುದಾಯಗಳಿಗೆ ಸಂಬಂಧಿಸಿದಂತೆ ಇರುವ ನಿಗಮಗಳ ಸಂಖ್ಯೆ ಎಷ್ಟು; ಅವುಗಳು ಯಾವುವು; (ಅಭಿವೃದ್ಧಿ ನಿಗಮಗಳ ಹೆಸರಿನೊಂದಿಗೆ ಮಾಹಿತಿ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ನಿಗಮಗಳ ಸಂಖ್ಯೆ:08 ಅಭಿವೃದ್ಧಿ ನಿಗಮಗಳ ಹೆಸರು ಈ ಕೆಳಕಂಡಂತಿದೆ.<br>1. ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ<br>2. ಕರ್ನಾಟಕ ಅಲೆಮಾರಿ ಮತ್ತು ಅರೆ ಅಲೆಮಾರಿ ಅಭಿವೃದ್ಧಿ ನಿಗಮ<br>3. ಕರ್ನಾಟಕ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ.<br>4. ಕರ್ನಾಟಕ ಸವಿತಾ ಸಮಾಜ ಅಭಿವೃದ್ಧಿ ನಿಗಮ<br>5. ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ<br>6. ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ.<br>7. ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ<br>8. ಕರ್ನಾಟಕ ಆರ್ಯ ವೈಶ್ಯ ಸಮುದಾಯ ಅಭಿವೃದ್ಧಿ ನಿಗಮ.<br>9. ವೀರಶೈವ ಅಭಿವೃದ್ಧಿ ನಿಗಮ ನಿಯಮಿತ.<br>10. ಮರಾಠ ಅಭಿವೃದ್ಧಿ ನಿಗಮ ನಿಯಮಿತ. |
| ಆ) | 2019-20 ಹಾಗೂ 2020-21ನೇ ಸಾಲಿನಲ್ಲಿ ವಿವಿಧ ಸಮುದಾಯದ ಅಭಿವೃದ್ಧಿ ನಿಗಮಗಳಿಗೆ ನೀಡಲಾಗಿರುವ ಅನುದಾನವೆಷ್ಟು; (ವಿವರ ನೀಡುವುದು) | 2019-20 ಹಾಗೂ 2020-21ನೇ ಸಾಲಿನಲ್ಲಿ ವಿವಿಧ ಸಮುದಾಯದ ಅಭಿವೃದ್ಧಿ ನಿಗಮಗಳಿಗೆ ನೀಡಲಾಗಿರುವ ಅನುದಾನದ ವಿವರ ಈ ಕೆಳಕಂಡಂತಿದೆ. |

(ಲಕ್ಷ.ರೂಗಳಲ್ಲಿ)

| ಕ್ರ ಸಂ. | ನಿಗಮದ ಹೆಸರು | ನೀಡಿರುವ ಅನುದಾನ 2019-20 | 2020-21 |
|---|---|---|---|
| 1 | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ | 250000.00 | 8000.00 |
| 2 | ಕರ್ನಾಟಕ ಅಲೆಮಾರಿ ಮತ್ತು ಅರೆ ಅಲೆಮಾರಿ ಅಭಿವೃದ್ಧಿ ನಿಗಮ. | 2500.00 | 29.00 |
| 3 | ಕರ್ನಾಟಕ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ | 2500.00 | - |
| 4 | ಕರ್ನಾಟಕ ಸವಿತಾ ಸಮಾಜ ಅಭಿವೃದ್ಧಿ ನಿಗಮ | 200.00 | - |
| 5 | ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ | 800.00 | 900.00 |
| 6 | ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ | 2500.00 | 1000.00 |
| 7 | ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ | 800.00 | 529.00 |
| 8 | ಕರ್ನಾಟಕ ಆರ್ಯ ವೈಶ್ಯ ಸಮುದಾಯ ಅಭಿವೃದ್ಧಿ ನಿಗಮ. | 100.00 | 500.00 |
| 9 | ವೀರಶೈವ ಅಭಿವೃದ್ಧಿ ನಿಗಮ | - | 1000.00 |
| 10 | ಮರಾಠ ಅಭಿವೃದ್ಧಿ ನಿಗಮ ನಿಯಮಿತ. | 5000.00 (ರೂ.50 ಕೋಟಿಗಳ ವೆಚ್ಚದಲ್ಲಿ ಈ ಕಾಮಗಾರಿಗಳನ್ನು ಕೈಗೊಳ್ಳಲು ಅನುಮತಿ ನೀಡಲಾಗಿದೆ. ಅನುದಾನವನ್ನು ವೆಚ್ಚಕನುಸಾರವಾಗಿ ಬಿಡುಗಡೆ ಮಾಡಲಾಗುವುದು) | |

ಇ) ಸದರಿ ಅನುದಾನದಲ್ಲಿ ಯಾವ ಯಾವ ನಿಗಮಗಳಿಗೆ ಎಷ್ಟೆಷ್ಟು ಹಣವನ್ನು ಬಿಡುಗಡೆ ಮಾಡಲಾಗಿದೆ? (ವಿವರ ನೀಡುವುದು)

2019-20 ಹಾಗೂ 2020-21ನೇ ಸಾಲಿನಲ್ಲಿ ನೀಡಲಾದ ಅನುದಾನದಲ್ಲಿ ನಿಗಮಗಳಿಗೆ ಬಿಡುಗಡೆ ಮಾಡಿದ ಅನುದಾನದ ವಿವರ ಈ ಕೆಳಕಂಡಂತಿದೆ.

(ಲಕ್ಷ.ರೂಗಳಲ್ಲಿ)

| ಕ್ರ ಸಂ. | ನಿಗಮದ ಹೆಸರು | ಬಿಡುಗಡೆ ಮಾಡಿರುವ ಅನುದಾನ | |
|---|---|---|---|
| | | 2019–20 | 2020–21 (ಫೆಬ್ರವರಿ–21ರ ಅಂತ್ಯಕ್ಕೆ) |
| 1 | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ | 16500.00 | 800.00 |
| 2 | ಕರ್ನಾಟಕ ಅಲೆಮಾರಿ ಮತ್ತು ಅರೆ ಅಲೆಮಾರಿ ಅಭಿವೃದ್ಧಿ ನಿಗಮ. | 2500.00 | 20.00 |
| 3 | ಕರ್ನಾಟಕ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ | 2500.00 | - |
| 4 | ಕರ್ನಾಟಕ ಸವಿತಾ ಸಮಾಜ ಅಭಿವೃದ್ಧಿ ನಿಗಮ | 200.00 | - |
| 5 | ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ | 800.00 | 950.00 |
| 6 | ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ | 2500 | 1000.00 |
| 7 | ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ | 800.00 | 529.00 |
| 8 | ಕರ್ನಾಟಕ ಆರ್ಯ ವೈಶ್ಯ ಸಮುದಾಯ ಅಭಿವೃದ್ಧಿ ನಿಗಮ. | 100.00 | 500.00 |
| 9 | ವೀರಶೈವ ಅಭಿವೃದ್ಧಿ ನಿಗಮ ನಿಯಮಿತ. | - | 1000.00 |
| 10 | ಮರಾಠ ಅಭಿವೃದ್ಧಿ ನಿಗಮ ನಿಯಮಿತ. | - | 5000.00 |

ಸಂಖ್ಯೆ:ಹಿಂವಕ 229 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2677

ಸದಸ್ಯರ ಹೆಸರು : ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ)

ಉತ್ತರಿಸುವ ದಿನಾಂಕ : 22.03.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಒಟ್ಟು ಎಷ್ಟು ಎಕರೆ ಸರ್ಕಾರಿ ಭೂಮಿಯನ್ನು ಒತ್ತುವರಿ ಮಾಡಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಒಟ್ಟು 1418099 ಎಕರೆ ಸರ್ಕಾರಿ ಜಮೀನು ಒತ್ತುವರಿಯಾಗಿರುತ್ತದೆ. |
| ಆ) | ಒತ್ತುವರಿ ಭೂಮಿಯನ್ನು ತೆರವುಗೊಳಿಸಲು ಸರ್ಕಾರಕ್ಕೆ ಇಚ್ಛಾಶಕ್ತಿ ಇದೆಯೇ; | ಸರ್ಕಾರಿ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಕಾರ್ಯ ಪಡೆಗಳನ್ನು ರಚಿಸಲಾಗಿದ್ದು, ಅದರಂತೆ ಎಲ್ಲಾ ಜಿಲ್ಲಾಧಿಕಾರಿಗಳು ಕಾಲಬದ್ಧ ಕ್ರಿಯಾ ಯೋಜನೆ ಸಿದ್ಧಪಡಿಸಿಕೊಂಡಿದ್ದು, ಒತ್ತುವರಿ ಆಗಿರುವ ಸರ್ಕಾರಿ ಜಮೀನುಗಳನ್ನು ತೆರವುಗೊಳಿಸಲು ಕ್ರಮವಹಿಸಲಾಗುತ್ತಿದೆ.<br>ಒತ್ತುವರಿ ಪ್ರಕರಣಗಳನ್ನು ಸಮರ್ಥವಾಗಿ ತಡೆಯುವ ಸಲುವಾಗಿ ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯವನ್ನು ರಚಿಸಿದ್ದು, ವಿವಿಧ ನ್ಯಾಯಾಲಯಗಳಲ್ಲಿ ಒತ್ತುವರಿಗೆ ಸಂಬಂಧಿಸಿದಂತೆ ಬಾಕಿ ಇರುವ ಎಲ್ಲಾ ಪ್ರಕರಣಗಳನ್ನು ವಿಶೇಷ ನ್ಯಾಯಾಲಯಕ್ಕೆ ವರ್ಗಾಯಿಸಲು ಎಲ್ಲಾ |
| ಇ) | ಹಾಗಿದ್ದಲ್ಲಿ, ತೆರವುಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | |

| | | |
|---|---|---|
| | | ಕಂದಾಯ ಅಧಿಕಾರಿಗಳಿಗೆ ಸೂಚಿಸಲಾಗಿದ್ದು, ವರ್ಗಾವಣೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ ಹಾಗೂ ಒತ್ತುವರಿದಾರರ ವಿರುದ್ಧ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ಕಲಂ 192-ಎ ರನ್ವಯ ಶಿಸ್ತು ಕ್ರಮ ಕೈಗೊಳ್ಳಲಾಗುತ್ತದೆ.<br>ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 20 ಎಲ್‌ಜಿಪಿ 2020; ದಿನಾಂಕ:20.01.2020 ರಂತೆ ಸರ್ಕಾರಿ ಜಮೀನು ಒತ್ತುವರಿ ತೆರವುಗೊಳಿಸುವುದು, ಒತ್ತುವರಿದಾರರ ವಿರುದ್ಧ ಕ್ರಮ ಜರುಗಿಸುವುದು, ಒತ್ತುವರಿ ತೆರವುಗೊಳಿಸಲು ವಿಫಲರಾಗಿರುವ ಅಧಿಕಾರಿಗಳು/ಭೂ ಕಬಳಿಕೆಗೆ ದುಷ್ಪ್ರೇರಣೆ ನೀಡಲು ನಕಲಿ ದಾಖಲೆಗಳನ್ನು ಸೃಷ್ಟಿಸಲು ಶಾಮೀಲಾಗಿರುವ ಅಧಿಕಾರಿ/ಸಿಬ್ಬಂದಿ ಗಳ ವಿರುದ್ಧ ಕಾನೂನು/ಶಿಸ್ತು ಕ್ರಮಗಳನ್ನು ಜರುಗಿಸಲು ಸೂಚನೆ ನೀಡಲಾಗಿದೆ ಮತ್ತು ಸದರಿಯವರುಗಳ ವಿರುದ್ಧ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 192(ಬಿ) ರನ್ವಯ ಶಿಸ್ತು ಕ್ರಮ ಕೈಗೊಳ್ಳಲಾಗುತ್ತದೆ. |

**ಸಂಖ್ಯೆ: ಆರ್‌ಡಿ 73 ಎಲ್‌ಜಿಕ್ಯೂ 2021**

**(ಆರ್ .ಅಶೋಕ)**
**ಕಂದಾಯ ಸಚಿವರು.**

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2678 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹರ್ಷವರ್ಧನ್ ಬಿ. (ನಂಜನಗೂಡು) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ಈ ವರ್ಗದವರಿಗೆ ನಿರ್ಮಿಸಿರುವ ಭವನಗಳು ಎಷ್ಟು; ಯಾವ ಯಾವ ತಾಲ್ಲೂಕಿನಲ್ಲಿ ಯಾವ ಯಾವ ಭವನಗಳನ್ನು ನಿರ್ಮಿಸಲಾಗಿದೆ; | ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ವಿವಿಧ ಸಂಘ-ಸಂಸ್ಥೆಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡಲಾದ ಅನುದಾನದ ವಿವರ ಹಾಗೂ ಕಾಮಗಾರಿ ಪೂರ್ಣಗೊಂಡಿರುವ ವಿವರ ಮತ್ತು ಪ್ರಗತಿಯಲ್ಲಿರುವ ಕಾಮಗಾರಿಗಳ ವಿವರಗಳನ್ನು ಇಲಾಖಾ ಅಂತರ್ಜಾಲ https://bcwd.Karnataka.gov.in/ ರಲ್ಲಿ ನೀಡಲಾಗಿದೆ.<br>ಈಗಾಗಲೇ ಬಿಡುಗಡೆಯಾಗಿರುವ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರ ಮತ್ತು ಪ್ರಗತಿ ವರದಿ ಸಲ್ಲಿಸಿದ ನಂತರ, ಸದರಿ ಯೋಜನೆಯಡಿ ಲಭ್ಯವಾಗುವ ಅನುದಾನ ಹಾಗೂ ರಾಜ್ಯದ ಒಟ್ಟಾರೆ ಬೇಡಿಕೆಯನ್ನಾಧರಿಸಿ ಬಾಕಿ ಅನುದಾನ ಬಿಡುಗಡೆಗೊಳಿಸಿ ಸದರಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |
| ಆ) | ಕಳೆದ ಮೂರು ವರ್ಷಗಳಿಂದ ಸಂಪೂರ್ಣ ಕಾಮಗಾರಿ ಮುಗಿದಿರುವ ಭವನಗಳು ಎಷ್ಟು; ಪೂರ್ಣಗೊಳ್ಳದಿರುವ ಭವನಗಳು ಎಷ್ಟು; ಯಾವಾಗ ಭವನಗಳ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು; | |
| ಇ) | 2018-19 ಮತ್ತು 2019-20ನೇ ಸಾಲಿನಲ್ಲಿ ಈ ಇಲಾಖೆಯಿಂದ ಯಾವ್ಯಾವ ಮಠಗಳು/ಸಮುದಾಯ ಭವನಗಳ ನಿರ್ಮಾಣ/ದುರಸ್ತಿ ಇತ್ಯಾದಿಗಳಿಗೆ ಅನುದಾನ ಬಿಡುಗಡೆಗೊಳಿಸಲಾಗಿದೆ; ಅವುಗಳ ಕಾಮಗಾರಿಯನ್ನು ಮಂಜೂರು ಮಾಡಲು ಅನುಸರಿಸುತ್ತಿರುವ ಮಾನದಂಡಗಳಾವುವು; | 2018-19 ಮತ್ತು 2019-20 ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿ ವಿವಿಧ ಸಂಘ-ಸಂಸ್ಥೆಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ನಿರ್ಮಾಣಕ್ಕೆ ಬಿಡುಗಡೆ ಮಾಡಲಾದ ಅನುದಾನದ ವಿವರಗಳನ್ನು ಇಲಾಖಾ ಅಂತರ್ಜಾಲ https://bcwd.Karnataka.gov.in/ ರಲ್ಲಿ ನೀಡಲಾಗಿದೆ.<br>ವಿವಿಧ ಸಮುದಾಯದವರು ನಿರ್ಮಾಣ ಮಾಡುತ್ತಿರುವ ಭವನಗಳಿಗೆ ಸಹಾಯಧನ ಮಂಜೂರು ಮಾಡಲು ಸರ್ಕಾರದ ಆದೇಶ ಸಂಖ್ಯೆ: ಹಿಂವಕ 695 ಬಿಎಂಎಸ್ 2014 (ಭಾ-2) ದಿನಾಂಕ : 05.11.2014 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಹಿಂವಕ 1133 ಬಿಎಂಎಸ್ 2017, ದಿನಾಂಕ: 29.11.2017 ರಲ್ಲಿನ ಮಾರ್ಗಸೂಚಿಗಳನ್ನು ಅನುಸರಿಸಲಾಗುತ್ತಿದೆ. ಆದೇಶಗಳ ಪ್ರತಿಗಳನ್ನು ಇಲಾಖಾ ಅಂತರ್ಜಾಲ https://bcwd.Karnataka.gov.in/ ರಲ್ಲಿ ನೀಡಲಾಗಿದೆ. |

| | | |
|---|---|---|
| ಈ) | ಮೈಸೂರು ಜಿಲ್ಲೆಯಲ್ಲಿ ಮಠಗಳು/ ಸಮುದಾಯ ಭವನಗಳ ನಿರ್ಮಾಣ, ದುರಸ್ತಿ, ಇತ್ಯಾದಿ ಕಾಮಗಾರಿಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ (ವಿವರಗಳನ್ನು ನೀಡುವುದು) ? | ಇಲ್ಲ. |

ಸಂಖ್ಯೆ:ಹಿಂವಕ 228 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **2700** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 2018-19 ರಿಂದ 2020-21 ನೇ ಸಾಲಿನವರೆಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿಗೆ ವಸತಿ ಇಲಾಖೆಯಲ್ಲಿ ಬರುವ ವಿವಿಧ ವಸತಿ ಯೋಜನೆ ಅಡಿಯಲ್ಲಿ ಎಷ್ಟು ಮನೆಗಳನ್ನು ಮಂಜೂರು ಮಾಡಲಾಗಿದೆ ; (ಯೋಜನಾವಾರು ಮಂಜೂರಾದ ಮನೆಗಳ ವರ್ಷ, ಸಂಖ್ಯೆಯನ್ನೊಳಗೊಂಡಂತೆ ಸಂಪೂರ್ಣ ವಿವರ ಒದಗಿಸುವುದು) | 2018-19 ರಿಂದ 2020-21 ನೇ ಸಾಲಿನವರೆಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿಗೆ ವಿವಿಧ ವಸತಿ ಯೋಜನೆ ಅಡಿಯಲ್ಲಿ 594 ಮನೆಗಳನ್ನು ಮಂಜೂರು ಮಾಡಿ ಕಾಮಗಾರಿ ಆದೇಶ ನೀಡಲಾಗಿದೆ. ಯೋಜನಾವಾರು ವಿವರ ಕೆಳಕಂಡಂತಿದೆ. |

| ಯೋಜನೆ | ಶ್ರೇಣಿ | ಮಂಜೂರು ಮಾಡಲಾದ ಮನೆಗಳ ಸಂಖ್ಯೆ |
|---|---|---|
| ದೇವರಾಜು ಅರಸು ವಸತಿ ಯೋಜನೆ(ಗ್ರಾಮೀಣ) | 2018-2019 | 3 |
| | 2019-2020 | 31 |
| | 2020-2021 | 6 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ) | 2019-2020 | 554 |
| ಒಟ್ಟು | | **594** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಈ ಫಲಾನುಭವಿಗಳ ನಿರ್ಮಾಣಗೊಂಡ ಮನೆಗಳಿಗೆ ನಿಗದಿತ ಕಂತುಗಳನ್ನು ಬಿಡುಗಡೆ ಮಾಡಲಾಗಿದೆಯೇ ; | ಸರ್ಕಾರವು ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳ ಪೈಕಿ ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಮನೆಗಳಲ್ಲಿ ಅನರ್ಹ ಫಲಾನುಭವಿಗಳ ಆಯ್ಕೆ ಕಂಡುಬಂದಿರುವುದರಿಂದ ಸರ್ಕಾರವು ವಿವಿಧ ವಸತಿ ಯೋಜನೆಗಳಡಿ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ:ವಇ 54 ಹೆಚ್‌ಎಎಂ 2019, ದಿನಾಂಕ: 16.11.2019 ರಲ್ಲಿ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾಪಂಚಾಯತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ ಅರ್ಹಗೊಂಡ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು. |
| (ಇ) | ಮಾಡದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು ; | |

<table>
<tr>
<td></td>
<td></td>
<td>ಪ್ರಸ್ತುತ ವಿಜಿಲ್ ಆಪ್ ಮೂಲಕ ಪರಿಶೀಲಿಸಿ, ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಲ್ಲಿ ಆಗುತ್ತಿರುವ ವಿಳಂಬವನ್ನು ಗಮನಿಸಿ ಸರ್ಕಾರವು ಆದೇಶ ಸಂಖ್ಯೆ :ವಇ 12 ಹೆಚ್‌ಎಹೆಚ್ 2020, ದಿನಾಂಕ :01.02.2021 & 02.02.2021 ರಲ್ಲಿ ವಿಜಿಲ್ ಆಪ್ ಮೂಲಕ ಪರಿಶೀಲಿಸುವುದಕ್ಕೆ ದಿನಾಂಕ :31.03.2021 ರವರಗೆ ವಿನಾಯಿತಿ ನೀಡಲಾಗಿದ್ದು, ಅದರಂತೆ ಪ್ರಸ್ತುತ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವ ವಿಧಾನಗಳನ್ನು ಸರಳೀಕರಣಗೊಳಿಸಿ ಭೌತಿಕ ಪ್ರಗತಿಗನುಗುಣವಾಗಿ ಎಲ್ಲಾ ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಅದರಂತೆ 2018-19 ರಿಂದ 2020-21ನೇ ಸಾಲಿನವರೆಗೆ ವಿವಿಧ ಯೋಜನೆಗಳಡಿ ನಿರ್ಮಿಸಲಾದ ಮನೆಗಳಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿಗೆ ಒಟ್ಟಾರೆಯಾಗಿ ರೂ.0.251 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಯೋಜನಾವಾರು ವಿವರ ಈ ಕೆಳಕಂಡಂತಿದೆ.<br>
(ರೂ. ಕೋಟಿಗಳಲ್ಲಿ)
<table>
<tr><th>ಯೋಜನೆ</th><th>2018-19</th><th>2019-20</th><th>2020-21</th></tr>
<tr><td>ಪ್ರಧಾನ ಮಂತ್ರಿ ಆವಾಸ್ ಯೋಜನೆ</td><td>0.00</td><td>0.00</td><td>0.24</td></tr>
<tr><td>ದೇವರಾಜು ಅರಸು ವಸತಿ ಯೋಜನೆ</td><td>0.00</td><td>0.00</td><td>0.011</td></tr>
<tr><td>ಒಟ್ಟು</td><td>0.00</td><td>0.00</td><td>0.251</td></tr>
</table>
</td>
</tr>
<tr>
<td>(ಈ)</td>
<td>ಈಗಾಗಲೇ ವಿವಿಧ ವಸತಿ ಯೋಜನೆ ಅಡಿಯಲ್ಲಿ ಮಂಜೂರಾದ ಮನೆಗಳನ್ನು ಬ್ಲಾಕ್ (ಸ್ಥಗಿತ) ಮಾಡಲಾಗಿದ್ದು, ಅವುಗಳನ್ನು ಅನ್‌ಬ್ಲಾಕ್ (ತೆರವು) ಮಾಡಲು ಸರ್ಕಾರ ತೆಗೆದು ಕೊಂಡ ಕ್ರಮವೇನು ?</td>
<td>ಸರ್ಕಾರದ "ಮನೆ" ಮಾರ್ಗಸೂಚಿಯನ್ವಯ ನಿಗಮದಿಂದ ಕಾಮಗಾರಿ ಆದೇಶ ನೀಡಿದ 90 ದಿನಗಳೊಳಗಾಗಿ ಫಲಾನುಭವಿಯು ಮನೆಯ ಕಾಮಗಾರಿಯನ್ನು ಪ್ರಾರಂಭಿಸಬೇಕಿದ್ದು, ಒಂದು ವರ್ಷದೊಳಗಾಗಿ ಮನೆಯನ್ನು ಪೂರ್ಣಗೊಳಿಸ ಬೇಕಾಗಿರುತ್ತದೆ. ಹೀಗೆ ನಿಗದಿತ ಸಮಯದಲ್ಲಿ ಕಾಮಗಾರಿಯನ್ನು ಪ್ರಾರಂಭಮಾಡಿಕೊಳ್ಳದ ಮನೆಗಳನ್ನು ಮನೆ ಮಾರ್ಗಸೂಚಿಗಳನ್ವಯ ಬ್ಲಾಕ್ ಮಾಡಲಾಗಿತ್ತು.<br><br>
ಜನ ಪ್ರತಿನಿಧಿಗಳ ಕೋರಿಕೆಯಂತೆ ಸರಕಾರವು ದಿನಾಂಕ: 14.02.2020 ರಂದು ಆದೇಶ ಹೊರಡಿಸಿ ವಿವಿಧ ವಸತಿ ಯೋಜನೆಗಳಡಿ ನಿಗದಿತ ಸಮಯದಲ್ಲಿ ಪ್ರಾರಂಭಗೊಳ್ಳದೇ ಬ್ಲಾಕ್ ಆಗಿದ್ದ ಮನೆಗಳನ್ನು ತೆರವುಗೊಳಿಸಿ, ವಾಸ್ತವವಾಗಿ ಪ್ರಾರಂಭವಾಗಿರುವ ಮನೆಗಳ ಛಾಯಾಚಿತ್ರಗಳನ್ನು ಜಿಪಿಎಸ್ ಗೆ ಅಳವಡಿಸಲು ಒಂದೂವರೆ ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಜಿ.ಪಿ.ಎಸ್. ಮಾಡಿರುವ ಮನೆಗಳನ್ನು ಪ್ರಗತಿಗೆ ಪರಿಗಣಿಸಿ ಉಳಿದ ಎಲ್ಲಾ ಮನೆಗಳನ್ನು ಸರ್ಕಾರದ ಆದೇಶ ಸಂ: ವಇ 12 ಹೆಚ್‌ಎಹೆಚ್ 2020, ದಿನಾಂಕ :19.05.2020 ರನ್ವಯ ರದ್ದುಪಡಿಸಲಾಗಿದೆ. ಪ್ರಸ್ತುತ ಬ್ಲಾಕ್ ಆದ ಮನೆಗಳನ್ನು ತೆರವುಗೊಳಿಸುವ ಯಾವುದೇ ಪ್ರಸ್ತಾವನೆಗಳು ಇರುವುದಿಲ್ಲ.</td>
</tr>
</table>

ಸಂಖ್ಯೆ :ವಇ 144 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2701 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಠಗಿ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕುಷ್ಠಗಿ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ಮೆಟ್ರಿಕ್-ಪೂರ್ವ/ನಂತರದ ವಸತಿನಿಲಯಗಳನ್ನು ಮಂಜೂರು ಮಾಡುವ ಉದ್ದೇಶವಿದೆಯೇ; | ಕೊಪ್ಪಳ ಜಿಲ್ಲೆ, ಕುಷ್ಠಗಿ ತಾಲ್ಲೂಕಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಪ್ರಸ್ತುತ 10 ಮೆಟ್ರಿಕ್-ಪೂರ್ವ ಮತ್ತು 4 ಮೆಟ್ರಿಕ್-ನಂತರದ ಹೀಗೆ ಒಟ್ಟು 14 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿರುತ್ತವೆ.<br><br>ಪ್ರಸ್ತುತ, ಕುಷ್ಠಗಿ ತಾಲ್ಲೂಕಿನಲ್ಲಿ 6 ಮೆಟ್ರಿಕ್ ಪೂರ್ವ ಹಾಗೂ 1 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಮಂಜೂರಾತಿಗೆ ಬೇಡಿಕೆ ಇದ್ದು, ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿ ಮಾರ್ಗಸೂಚಿಯನ್ವಯ ಪ್ರಸ್ತಾವನೆಗಳು ಜಿಲ್ಲೆಯಿಂದ ಸ್ವೀಕೃತವಾಗಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಯಾವ ಸ್ಥಳಗಳಲ್ಲಿ (ಗ್ರಾಮಗಳಲ್ಲಿ) ಈ ವಸತಿನಿಲಯಗಳನ್ನು ಪ್ರಾರಂಭಿಸಲಾಗುವುದು; ಪ್ರಾರಂಭಿಸಲಾಗುವ ವಸತಿನಿಲಯಗಳ ಸಂಖ್ಯೆ ಎಷ್ಟು; | ಕುಷ್ಠಗಿ ತಾಲ್ಲೂಕಿನಲ್ಲಿ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಮಂಜೂರಾತಿಗಾಗಿ ಈ ಕೆಳಕಂಡ ಸ್ಥಳಗಳಲ್ಲಿ ಬೇಡಿಕೆ ಇರುತ್ತದೆ.<br><br>1. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಶಿರಗುಂಪಿ<br>2. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಮೆಣದಾಳ<br>3. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಸಂಗನಾಳ<br>4. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಮನ್ನೆರಾಳ<br>5. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಜುಮಲಾಪೂರ<br>6. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಲಿಂಗದಹಳ್ಳಿ<br>7. ಮೆಟ್ರಿಕ್ ನಂತರದ ವೃತ್ತಿಪರ ಬಾಲಕರ ವಿದ್ಯಾರ್ಥಿನಿಲಯ, ಕುಷ್ಠಗಿ<br><br>ಆದರೆ ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯಾ ಆರ್ಥಿಕ ವರ್ಷದ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |
| ಇ) | ವಸತಿನಿಲಯಗಳಲ್ಲಿ ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಹೆಚ್ಚಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ; | ಸರ್ಕಾರದ ಆದೇಶ ಸಂಖ್ಯೆ ಹಿಂವಕ 352 ಬಿಎಂಎಸ್ 2019, ದಿನಾಂಕ 21.1.2020ರಲ್ಲಿ ರಾಜ್ಯದ ವಿವಿಧ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಸಂಖ್ಯಾಬಲ ಹೆಚ್ಚಳ ಮಾಡಲಾಗಿರುತ್ತದೆ, ಅದರಂತೆ, ಕುಷ್ಠಗಿ ತಾಲ್ಲೂಕಿನ 3 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಸಂಖ್ಯಾಬಲವನ್ನು ಹೆಚ್ಚಿಸಲಾಗಿದ್ದು, ವಿವರ ಕೆಳಕಂಡಂತಿದೆ. |

| ಕ್ರ. ಸಂ. | ವಿದ್ಯಾರ್ಥಿನಿಲಯದ ವಿವರ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚಳ ಮಾಡಿರುವ ಸಂಖ್ಯಾಬಲ |
|---|---|---|---|
| 1 | ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ, ಕುಷ್ಠಗಿ | 100 | 10 |
| 2 | ಮೆಟ್ರಿಕ್-ನಂತರದ ಬಾಲಕರ ವಿದ್ಯಾರ್ಥಿನಿಲಯ, ಕುಷ್ಠಗಿ | 100 | 10 |
| 3 | ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ, ಕುಷ್ಠಗಿ | 105 | 10 |
| | **ಒಟ್ಟು** | **305** | **30** |

| | | |
|---|---|---|
| ಈ | ರಾಜ್ಯದಲ್ಲಿ ಹೊಸದಾಗಿ ಈ ವಸತಿನಿಲಯಗಳನ್ನು ಮಂಜೂರು ಮಾಡಲು ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ ? | ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |

ಸಂಖ್ಯೆ:ಹಿಂವಕ 220 ಬಿಂಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2702 |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಸದಸ್ಯರ ಹೆಸರು | : | ಶ್ರೀ ನಂಜೇಗೌಡ ಕೆ.ವೈ. (ಮಾಲೂರು) |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಹಲವಾರು ರೈತರ ಪಹಣಿಯಲ್ಲಿ 'P' ಎಂದು ನಮೂದಿಸಿರುವುದರಿಂದ ರೈತರು ಸಾಲ ಸೌಲಭ್ಯ ಹಾಗೂ ಇತರೆ ಸರ್ಕಾರದ ಸೌಲಭ್ಯಗಳಿಂದ ವಂಚಿತರಾಗಿ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಈ ಹಿಂದೆ ರೈತರ ಜಮೀನುಗಳ ಪಹಣಿಗಳಲ್ಲಿ ನಂಬರ್ (ಪಿ.ನಂ) ಪೈಕಿ ಎಂದು ನಮೂದಿಸಿದ್ದು, ಆದರೆ ತಂತ್ರಾಂಶದಲ್ಲಿ ಈ ರೀತಿ ಪೈಕಿ ಎಂದು ನಮೂದಿಸಲು ಅವಕಾಶವಿರುವದಿಲ್ಲ. |
| ಆ | ಬಂದಿದ್ದಲ್ಲಿ, 'P' ನಂಬರ್ ತೆಗೆಯಲು ಸರ್ಕಾರಕ್ಕೆ ಇರುವ ಮಾನದಂಡಗಳೇನು; (ಮಾಹಿತಿ ಒದಗಿಸುವುದು) | **ಪಹಣಿಯಲ್ಲಿಯ ಪೈಕಿ ಎಂದು ತೆಗೆದು ದುರಸ್ಥಿ ಮಾಡುವ ಕುರಿತು ಸರ್ಕಾರ ತೆಗೆದುಕೊಂಡ ಕ್ರಮಗಳು :-**<br>1)ಈಗಾಗಲೆ ಸರ್ಕಾರವು ಮಂಜೂರಿ ಜಮೀನುಗಳಲ್ಲಿ ಪೋಡಿ ದುರಸ್ತಿ ಮಾಡುವ ಸಂಬಂಧ ಸುತ್ತೋಲೆ ಸಂಖ್ಯೆ ,ತಾಂತ್ರಿಕ. ದರಖಾಸ್ತು. ಪೋಡಿ. ಆಂದೋಲನ.40/ 2008-09 ದಿನಾಂಕ: 20-10-2008 ರನ್ವಯ ನಮೂನೆ 1 ರಿಂದ 5 ಭರ್ತಿ ಮಾಡಿ ಕಂದಾಯ ಕ್ರಮವಹಿಸಿದ ನಂತರ ಸುತ್ತೋಲೆ ಸಂಖ್ಯೆ ತಾಂ. ಆಡಳಿತ.ಸೂತ್ತೋಲೆ/29/2009-10 ದಿನಾಂಕ 25-01-2010 ರನ್ವಯ ಭೂಮಾಪನ ಇಲಾಖೆಯಿಂದ ನಮೂನೆ 6 ರಿಂದ 10 ರಲ್ಲಿ ಮಂಜೂರಿ ಬಗ್ಗೆ ಅಳತೆ ಮಾಡಿ ಮಾಹಿತಿಯನ್ನು ಭರ್ತಿ ಮಾಡಲು ಅಗತ್ಯ ಸೂಚನೆಗಳನ್ನು ನೀಡಿದೆ.<br><br>ಈ ರೀತಿಯಾಗಿ ಭರ್ತಿ ಮಾಡಿದ ಪ್ರಕರಣಗಳಲ್ಲಿ ಮಂಜೂರಿ ಹಕ್ಕು ಮತ್ತು ಅನುಭವಕ್ಕೆ ತಾಳೆ ಇರುವ ಪ್ರಕರಣಗಳ ಬಾಬ್ತು ಮಂಜೂರಿ ದಾಖಲೆಗಳನ್ನು ಪರಿಶೀಲಿಸಿ ದುರಸ್ತಿ ಕ್ರಮ ಜರುಗಿಸಲಾಗುತ್ತದೆ. ಉಳಿದ ಪ್ರಕರಣಗಳ ಬಗ್ಗೆ ಮಂಜೂರಿ ಪ್ರಾಧಿಕಾರದವರು ಮಂಜೂರಿ ಬಗ್ಗೆ ಪರಿಶೀಲಿಸಿ ಪರಿಷ್ಕರಿಸಿ ಆದೇಶಿಸಿದಂತೆ ದುರಸ್ತಿ ಕ್ರಮ ಜರುಗಿಸಲಾಗುತ್ತದೆ.<br><br>2) ತುರ್ತು ಮತ್ತು ವಿಶೇಷ ಸಂದರ್ಭದಲ್ಲಿ ಏಕವ್ಯಕ್ತಿ ಪ್ರಕರಣದಡಿ ಪೋಡಿ ದುರಸ್ತಿ ಪಡಿಸಲು ಸರ್ಕಾರವು ಸುತ್ತೋಲೆ ಸಂ.ಕಂ.ಇ.283 ಭೂದಾಸ. 2010. ದಿನಾಂಕ: 23.11.2010 ರನ್ವಯ ಜಿಲ್ಲಾಧಿಕಾರಿಗಳು ಭೂಮಂಜೂರಿಯು ನೈಜತೆಯಿಂದ ಕೂಡಿರುವ ಬಗ್ಗೆ ಪರಿಶೀಲಿಸಿ, ದೃಡಿಕರಿಸಿದ ನಂತರ ದುರಸ್ತಿ ಪಡಿಸಲಾಗುತ್ತಿತ್ತು. ಅದನ್ನು ಸರ್ಕಾರವು ಸರಳೀಕರಿಸಿ ಸುತ್ತೋಲೆ ಸಂಖ್ಯೆ ಆರ್ ಡಿ 8 ಎಲ್‌ಜಿಪಿ 2016 ದಿನಾಂಕ: |

| | | |
|---|---|---|
| | | 20-06-2016 ಹಾಗೂ ತಿದ್ದುಪಡಿ ಆರ್‌ಡಿ 8 ಎಲ್‌ಜಿಪಿ 2016 (ಭಾಗ-1) ದಿನಾಂಕ: 18-07-2016 ರನ್ವಯ ತಹಶಿಲ್ದಾರರು ಅರ್ಜಿದಾರರಿಗೆ ಆಗಿರುವ ಭೂಮಂಜೂರಿಯು ನೈಜತೆಯಿಂದ ಕೂಡಿರುವ ಬಗ್ಗೆ ಪರಿಶೀಲಿಸಿ, ಧೃಡೀಕರಿಸಿ ಏಕವ್ಯಕ್ತಿಗೆ ಪೋಡಿ ಮಾಡಲು ಆದೇಶಿಸಿ, ಭೂಮಾಪನ ಶಾಖೆಗೆ ಪ್ರಕರಣ ಕಳುಹಿಸಿದಲ್ಲಿ, ಅರ್ಜಿದಾರಾರ ಮಂಜೂರಿ ಜಮೀನನ್ನು ಅಳತೆಯಿಂದ ಪೋಡಿ ದುರಸ್ತಿ ಮಾಡುವ ಬಗ್ಗೆ ಕ್ರಮ ವಹಿಸಲು ಸೂಚನೆಗಳನ್ನು ನೀಡಲಾಗಿದೆ.<br><br>3) ಕಂದಾಯ ಇಲಾಖೆಯ ಅಭಿಲೇಖಾಲಯದ ಎಲ್ಲಾ ಮಂಜೂರಿ ಸಂಬಂಧಿಸಿದ ಕಡತಗಳನ್ನು Cataloging and Indexing ಮಾಡಲು ಸರ್ಕಾರದಿಂದ ಸೂಚಿಸಿದ್ದು, ಅದರಂತೆ ಕಂದಾಯ ಇಲಾಖೆಯಿಂದ ಕ್ರಮ ವಹಿಸಲಾಗುತ್ತದೆ.<br><br>4) ಪಹಣಿಯಲ್ಲಿನ ಮಾಲಿಕರ ಹೆಸರು/ಪೌತಿ ಖಾತೆ, ಇತ್ಯಾದಿಗಳ ಕುರಿತಂತೆ ತಿದ್ದುಪಡಿ ಮಾಡುವ ಸಂಬಂದ ಕಂದಾಯ ಇಲಾಖೆಯಿಂದ ಕಂದಾಯ ಅದಾಲತ್ ಗಳನ್ನು ನಡೆಸಲಾಗುತ್ತಿದೆ.<br>5)ಆಕಾರಬಂದು ಮತ್ತು ಪಹಣಿಯಲ್ಲಿನ ವಿಸ್ತೀರ್ಣದಲ್ಲಿಯ ವ್ಯತ್ಯಾಸಗಳನ್ನು ಸರಿಪಡಿಸುವ ಕುರಿತು ಭೂಮಾಪನ ಇಲಾಖೆಯಿಂದ ಸುತ್ತೋಲೆ ಸಂಖ್ಯೆ. ತಾಂತ್ರಿಕ.ದ/ಪೋ/ಆಂದೋಲನ 40 2008-09 ದಿನಾಂಕ: 7-7-2009 ಮತ್ತು ಸಂ.ಪಿ.ಎಂ.ಯು.ಮೋಜಿನಿ.ಸುತ್ತೋಲೆ-59/2011-12 ದಿನಾಂಕ. 5-3-2012 ಹಾಗೂ No. SSLR/13019/7/2018. PMU/SSLR ದಿನಾಂಕ15/3/2018ರಲ್ಲಿ ಅಗತ್ಯ ಸೂಚನೆಗಳನ್ನು ನೀಡಲಾಗಿದೆ, |
| ಇ | ಸುಮಾರು 50-60 ವರ್ಷಗಳಿಂದ ಸ್ವಾಧೀನಾನುಭವದಲ್ಲಿರುವ ರೈತರು ಮರಣ ಹೊಂದಿದಾಗ, ಸದರಿ ಸ್ವತ್ತನ್ನು ಅವರ ವಾರಸುದಾರರಿಗೆ ಪಾವತಿವಾರಸು ಖಾತೆ ಆಗದೇ ಅವರ ಮಕ್ಕಳು ತೊಂದರೆ ಅನುಭವಿಸುತ್ತಿರುವುದಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ಒದಗಿಸುವುದು) | ರೈತಾಪಿ ವರ್ಗದವರ ಸಮಸ್ಯೆಗಳನ್ನು ಪರಿಹರಿಸಿ, ಪೌತಿ/ವಾರಸಾ ಸ್ವರೂಪದ ಮ್ಯುಟೇಶನ್ ಪ್ರಕ್ರಿಯೆಯನ್ನು ಸರಳೀಕೃತಗೊಳಿಸಿ, ಪೌತಿ/ವಾರಸಾ ಖಾತೆ ಆಂದೋಲನವನ್ನು ನಡೆಸಲು ಮಾರ್ಗಸೂಚಿಗಳನ್ನು ಸರ್ಕಾರದ ಸೂತ್ತೋಲೆ ಸಂಖ್ಯೆ ಕಂ ಇ 33 ಟಿಆರ್‌ಎಂ 2019 (ಇ) ದಿನಾಂಕ 17-10-2020 ರಲ್ಲಿ ಹೊರಡಿಸಲಾಗಿದೆ. |
| ಈ | 'P' ನಂಬರ್ ಸಮಸ್ಯೆಯನ್ನು ಯಾವ ಕಾಲಮಿತಿಯೊಳಗೆ ಸರ್ಕಾರ ಸರಿಪಡಿಸಲು ಕ್ರಮಕೈಗೊಳ್ಳುವುದು? | "ಪಿ" ನಂಬರ್ ಸಮಸ್ಯೆಯನ್ನು ಬಗೆಹರಿಸುವ ಕಾರ್ಯ ಪ್ರಗತಿಯಲ್ಲಿದೆ |

ಕಂಇ 62 ಎಂ ಆರ್ ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **2711** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಜಾರಿಯಲ್ಲಿರುವ ವಿವಿಧ ವಸತಿ ಯೋಜನೆಗಳ ಅಡಿಯಲ್ಲಿ ಮಂಜೂರಾಗಿರುವ, ನಿರ್ಮಾಣವಾಗಿರುವ, ಪ್ರಗತಿಯಲ್ಲಿರುವ ಹಾಗೂ ರದ್ದಾಗಿರುವ ಮನೆಗಳೆಷ್ಟು; (ಸಂಪೂರ್ಣ ವಿವರ ನೀಡುವುದು) | 2017-2018 ರಿಂದ 2020-2021 ನೇ ಸಾಲಿನವರೆಗೆ ರಾಜ್ಯದಲ್ಲಿ ವಿವಿಧ ವಸತಿ ಯೋಜನೆಯಡಿಯಲ್ಲಿ 655660 ಮನೆಗಳನ್ನು ಮಂಜೂರು ಮಾಡಿ ಕಾಮಗಾರಿ ಆದೇಶ ಪತ್ರ ನೀಡಲಾಗಿರುತ್ತದೆ. ಈ ಮನೆಗಳ ಪೈಕಿ ಒಟ್ಟು 284201 ಮನೆಗಳು ನಿರ್ಮಾಣಗೊಂಡಿದ್ದು, 219373 ಮನೆಗಳು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತದೆ. 40339 ಮನೆಗಳು ಪ್ರಾರಂಭವಾಗಬೇಕಾಗಿದ್ದು, 111747 ಮನೆಗಳು ಕಾಲಾವಕಾಶ ನೀಡಿದ್ದರೂ ಸಹಾ ಪ್ರಾರಂಭ ಮಾಡಿಕೊಳ್ಳದಿರುವುದರಿಂದ ಸರ್ಕಾರದ ಆದೇಶದನ್ವಯ ಬ್ಲಾಕ್ ಆಗಿ ರದ್ದಾಗಿರುತ್ತದೆ. ಯೋಜನಾವಾರು ವಿವರವನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| (ಆ) | ನಿರ್ಮಾಣಗೊಂಡಿರುವ ಎಷ್ಟು ಮನೆಗಳನ್ನು Vigil app ನಲ್ಲಿ ಪರಿಶೀಲನೆಗೆ ವಹಿಸಲಾಗಿದೆ; ಇನ್ನು ಎಷ್ಟು ಮನೆಗಳನ್ನು ಒಳಪಡಿಸಬೇಕಾಗಿರುತ್ತದೆ; (ವಿವರ ಒದಗಿಸುವುದು) | ವಿವಿಧ ವಸತಿ ಯೋಜನೆಗಳಡಿ ಪ್ರಗತಿಯಲ್ಲಿರುವ ಹಾಗೂ ಅನುದಾನ ಬಿಡುಗಡೆಗೆ ಬಾಕಿ ಇದ್ದ ಒಟ್ಟು 3.41 ಲಕ್ಷ ಮನೆಗಳನ್ನು ವಿಜಿಲ್ ಆಪ್ ಪರಿಶೀಲನೆಗೆ ಒಳಪಡಿಸಲಾಗಿತ್ತು.<br><br>ಪ್ರಸ್ತುತ ಸರ್ಕಾರವು ವಿಜಿಲ್ ಆಪ್ ಮೂಲಕ ಪರಿಶೀಲಿಸಿ, ಅನುದಾನ ಬಿಡುಗಡೆ ಮಾಡುವಲ್ಲಿ ಆಗುತ್ತಿದ್ದ ವಿಳಂಬವನ್ನು ಗಮನಿಸಿ ಫಲಾನುಭವಿಗಳ ಹಿತದೃಷ್ಟಿಯಿಂದ ದಿನಾಂಕ:31.03.2021 ರವರಗೆ ವಿಜಿಲ್ ಮೂಲಕ ಪರಿಶೀಲನೆಗೆ ವಿನಾಯಿತಿ ನೀಡಲಾಗಿದ್ದು, ಪ್ರಸ್ತುತ ಭೌತಿಕ ಪ್ರಗತಿಗನುಗುಣವಾಗಿ ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಮಾರ್ಚ್-2021ರ ನಂತರ ಉಳಿದ ಫಲಾನುಭವಿಗಳನ್ನು ವಿಜಿಲ್ ಪರಿಶೀಲನೆಗೆ ಒಳಪಡಿಸುವ ಬಗ್ಗೆ ಪರಿಶೀಲಿಸಲಾಗುವುದು. |
| (ಇ) | ಅನೇಕ ಫಲಾನುಭವಿಗಳು ಸಾಲ ಮಾಡಿ ಮನೆ ಕಟ್ಟಿಕೊಂಡಿದ್ದು, ಹಲವಾರು ಅರ್ಧ ಮನೆ ಮಾತ್ರ ನಿರ್ಮಿಸಿಕೊಂಡು ಬೀದಿಗೆ ಬಿದ್ದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇವರುಗಳಿಗೆ ಹಣ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿಜಿಲ್ ಆಪ್ ಮೂಲಕ ಪರಿಶೀಲನೆ ಒಳಗೊಂಡಂತೆ ಒಟ್ಟಾರೆ ರೂ. 1698.62 ಕೋಟಿಗಳನ್ನು ಫಲಾನುಭವಿಗಳಿಗೆ ಬಿಡುಗಡೆ ಮಾಡಲಾಗಿದೆ.<br><br>ಹಂತ ಹಂತವಾಗಿ ಎಲ್ಲಾ ಅರ್ಹ ಫಲಾನುಭವಿಗಳಿಗೆ ಪ್ರಗತಿಗನುಗುಣವಾಗಿ DBT ಮೂಲಕ ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಲಾಗುತ್ತಿದೆ. |
| (ಈ) | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಹಣ ಬಿಡುಗಡೆ ಮಾಡಲಾಗುವುದು ? | |

ಸಂಖ್ಯೆ :ವಇ 145 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

3

LAQ-2711
ಅನುಬಂಧ

| Scheme | Series Year | Approved | Complete | Foundation | Lintel | Roof | P. Total | Unstarted | Block |
|---|---|---|---|---|---|---|---|---|---|
| Basava Housing Scheme | 2017-2018 | 333195 | 163073 | 41239 | 23777 | 42495 | 107511 | 12 | 62599 |
| Basava Housing Scheme | 2018-2019 | 467 | 206 | 64 | 21 | 88 | 173 | 0 | 88 |
| Devraj Urs Housing Scheme-Rural | 2017-2018 | 13317 | 4561 | 2287 | 1414 | 1802 | 5503 | 3121 | 132 |
| Devraj Urs Housing Scheme-Rural | 2018-2019 | 1108 | 48 | 368 | 152 | 60 | 580 | 473 | 7 |
| Devraj Urs Housing Scheme-Rural | 2019-2020 | 492 | 16 | 135 | 47 | 11 | 193 | 283 | 0 |
| Devraj Urs Housing Scheme-Rural | 2020-2021 | 4238 | 0 | 92 | 4 | 6 | 102 | 4056 | 80 |
| Devraj Urs Housing Scheme-Urban | 2017-2018 | 1757 | 552 | 233 | 181 | 217 | 631 | 561 | 13 |
| Devraj Urs Housing Scheme-Urban | 2018-2019 | 143 | 54 | 18 | 11 | 17 | 46 | 39 | 4 |
| Devraj Urs Housing Scheme-Urban | 2019-2020 | 43 | 2 | 5 | 9 | 5 | 19 | 22 | 0 |
| Dr.B.R Ambedkar Nivas Yojana Rural | 2017-2018 | 161774 | 61156 | 25732 | 16621 | 19998 | 62351 | 406 | 37861 |
| Dr.B.R Ambedkar Nivas Yojana Urban | 2017-2018 | 11736 | 4696 | 1326 | 1411 | 1633 | 4370 | 302 | 2368 |
| PMAY(G) | 2017-2018 | 54581 | 32837 | 6128 | 3553 | 4577 | 14258 | 6757 | 729 |
| PMAY(G) | 2019-2020 | 40321 | 1186 | 9440 | 2884 | 2209 | 14533 | 24306 | 296 |
| Vajpayee Urban Housing Scheme | 2017-2018 | 32452 | 15805 | 2672 | 2323 | 4092 | 9087 | 1 | 7559 |
| Vajpayee Urban Housing Scheme | 2018-2019 | 36 | 9 | 7 | 0 | 9 | 16 | 0 | 11 |
| **Total** | | **655660** | **284201** | **89746** | **52408** | **77219** | **219373** | **40339** | **111747** |

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3165 |
| 2 | ಸದಸ್ಯರ ಹೆಸರು | ಶ್ರೀ ಅವಿನಾಶ್ ಉಮೇಶ್ ಜಾಧವ್ ಡಾ|| (ಚಿಂಚೋಳಿ) |
| 3 | ಉತ್ತರಿಸಬೇಕಾದ ದಿನಾಂಕ | 22.03.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ಜನವರಿ 2021 ರ ಅಂತ್ಯದವರೆಗೆ ಕಲಬುರಗಿ ಜಿಲ್ಲೆಯ ಚಿಂಚೋಳಿ ವಿಧಾನಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ಪೋಡಿಗಾಗಿ ಸಲ್ಲಿಸಿದ ಅರ್ಜಿಗಳ ಸಂಖ್ಯೆ ಎಷ್ಟು? | ಕಳೆದ ಮೂರು ವರ್ಷಗಳಿಂದ (ಜನವರಿ 2021 ರ ಅಂತ್ಯದವರೆಗೆ) ಕಲಬುರಗಿ ಜಿಲ್ಲೆಯ ಚಿಂಚೋಳಿ ವಿಧಾನಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ತತ್ಕಾಲ್ ಪೋಡಿಗಾಗಿ ಸ್ವೀಕೃತವಾಗಿರುವ ಅರ್ಜಿಗಳ ಪ್ರಗತಿ ವಿವರ (see table below) |
| ಆ) | ಆ ಪೈಕಿ ಪೋಡಿ ಮಾಡಲಾಗಿರುವ ಹಾಗೂ ಬಾಕಿ ಇರುವ ಅರ್ಜಿಗಳ ಸಂಖ್ಯೆ ಎಷ್ಟು? | |
| ಇ) | ಬಾಕಿ ಇರುವ ಅರ್ಜಿಗಳನ್ನು ಯಾವ ಕಾಲಮಿತಿಯೊಳಗೆ ಪೋಡಿ ಮಾಡಿ ಕೊಡಲಾಗುವುದು? | (see below) |

| ವರ್ಷ | ಆ.ಶಿಲ್ಕು | ಸ್ವೀಕೃತಿ | ಒಟ್ಟು | ವಿಲೇ | ಬಾಕಿ |
|---|---|---|---|---|---|
| 2018-19 | 535 | 271 | 806 | 277 | **529** |
| 2019-20 | 529 | 3 4 | 893 | 372 | **521** |
| 2020-21 | 521 | 328 | 849 | 217 | **632** |
| **ಒಟ್ಟು** | **1585** | **633** | **2548** | **866** | **1682** |

**ಬಾಕಿ ಇರುವ ಅರ್ಜಿಗಳನ್ನು ಶೀಘ್ರವಾಗಿ ವಿಲೇವಾರಿ ಮಾಡಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.**

1. ಇಲಾಖೆಯಲ್ಲಿ ಅಳತೆ ಕೋರಿ ಸ್ವೀಕೃತವಾಗುವ ಎಲ್ಲಾ ಅರ್ಜಿಗಳನ್ನು ಮೋಜಿಣಿ ತಂತ್ರಾಂಶದ ಮುಖಾಂತರ ಆನ್‌ಲೈನ್‌ನಲ್ಲಿ ಸ್ವೀಕರಿಸಲಾಗುತ್ತಿದ್ದು, ಪ್ರತಿ ಹಂತದಲ್ಲಿಯೂ FIFO (ಸರದಿ ಸಾಲಿನಂತೆ) ಪದ್ಧತಿಯನ್ನು ಅಳವಡಿಸಲಾಗಿದೆ. ಪ್ರಕರಣವು ಅಳತೆಗೆ ಯೋಗ್ಯವಾಗಿದ್ದಲ್ಲಿ ಅಳತೆಗಾಗಿ ಭೂಮಾಪಕರಿಗೆ ತಂತ್ರಾಂಶದ ಮೂಲಕ ಆನ್‌ಲೈನ್‌ನಲ್ಲಿ ವಿತರಿಸಲಾಗುತ್ತಿದೆ. ಪ್ರಕರಣದಲ್ಲಿ ಅಳತೆಯಾದ ನಂತರ ಭೂಮಾಪಕರು ಆನ್‌ಲೈನ್‌ನಲ್ಲಿ ಕಡತಗಳನ್ನು ಅಪ್‌ಲೋಡ್ ಮಾಡಲು ಹಾಗೂ ಅಪ್‌ಲೋಡ್ ಮಾಡಿರುವ ಕಡತಗಳ ಪರಿಶೀಲನೆ ಮತ್ತು ಅನುಮೋದನೆಯನ್ನು ಸಹ ಆನ್‌ಲೈನ್‌ನಲ್ಲಿಯೇ ನಿರ್ವಹಿಸಲಾಗುತ್ತಿದೆ. ತಂತ್ರಾಂಶದ ಮುಖಾಂತರ, ಪ್ರಕರಣಗಳ ವಿಲೇವಾರಿಯಲ್ಲಿ ಯಾವುದೇ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮವಹಿಸಲಾಗುತ್ತಿದೆ.
2. ಕಾಲಕಾಲಕ್ಕೆ ಕಂದಾಯ ಇಲಾಖೆಯಿಂದ ಪಹಣಿ ತಿದ್ದುಪಡಿ ಕುರಿತು ಕಂದಾಯ ಅದಾಲತ್‌ಗಳನ್ನು ನಡೆಸಲಾಗುತ್ತಿದೆ.
3. ಕಂದಾಯ ಇಲಾಖೆಯ ಅಭಿಲೇಖಾಲಯದ ಎಲ್ಲಾ ಕಡತಗಳನ್ನು ಕ್ಯಾಟ್-ಲಾಗ್ ಮತ್ತು ಇಂಡೆಕ್ಸಿಂಗ್ ಮಾಡಲು ಸೂಚಿಸಲಾಗಿದೆ.
4. ನಿಯಮಿತವಾಗಿ ವಿಡಿಯೋ ಸಂವಾದ ಮತ್ತು ವಿಭಾಗವಾರು ಅಧಿಕಾರಿಗಳ ಸಭೆ ನಡೆಸಿ, ಪ್ರಗತಿ ಪರಿಶೀಲನೆ ಮಾಡಿ ಹೆಚ್ಚಿನ ಪ್ರಗತಿ ಸಾಧಿಸಲು ಸೂಕ್ತ ಮಾರ್ಗದರ್ಶನ ಮತ್ತು ಸೂಚನೆ ನೀಡಲಾಗುತ್ತಿದೆ.
5. ಸರ್ಕಾರದ ಸೂಚನೆಯನ್ವಯ ನಮೂನೆ 1 ರಿಂದ 5 ಅನ್ನು ಭರ್ತಿ ಮಾಡಲು ಅಗತ್ಯ ಸೂಚನೆ ಮತ್ತು ಮಾರ್ಗಸೂಚಿ ಗಳನ್ನು ನೀಡಲಾಗಿದೆ.

| | | |
|---|---|---|
| | | 6. ಹೆಚ್ಚಿನ ಪ್ರಕರಣಗಳು ಬಾಕಿ ಇರುವ ತಾಲ್ಲೂಕುಗಳಿಗೆ ಕಡಿಮೆ ಪ್ರಕರಣಗಳು ಬಾಕಿ ಇರುವ ತಾಲ್ಲೂಕಿನಿಂದ ಭೂಮಾಪಕರನ್ನು ನಿಯೋಜನೆ ಮಾಡಿ ಪ್ರಕರಣಗಳನ್ನು ಶೀಘ್ರವಾಗಿ ವಿಲೇಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>7. ಹೊಸದಾಗಿ 2072 ಪರವಾನಗಿ ಭೂಮಾಪಕರ ಆಯ್ಕೆಗೆ ಅಧಿಸೂಚನೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿದ್ದು, ದಿನಾಂಕ 1-2-2021 ಮತ್ತು 2-2-2021 ರಂದು ಪರೀಕ್ಷೆಯನ್ನು ನಡೆಸಿ, ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ. ಸದರಿ ಅಭ್ಯರ್ಥಿಗಳಿಗೆ ತರಬೇತಿ ನೀಡಿ ಉತ್ತೀರ್ಣ ರಾದವರಿಗೆ ಪರವಾನಗಿ ವಿತರಿಸಿ, ರಾಜ್ಯದ ವಿವಿಧ ತಾಲ್ಲೂಕುಗಳಿಗೆ ಕಾರ್ಯ ನಿಯೋಜನೆ ಮಾಡಲಾಗುವುದು.<br><br>ಮೇಲ್ಕಂಡಂತೆ ಬಾಕಿ ಪ್ರಕರಣಗಳನ್ನು ಶೀಘ್ರವಾಗಿ ವಿಲೇವಾರಿ ಮಾಡಲು ಕ್ರಮಕೈಗೊಳ್ಳಲಾಗುತ್ತದೆ. |

**ಸಂಖ್ಯೆ: ಕಂಇ 53 ಎಸ್‌ಎಸ್‌ಸಿ 2021**

**(ಆರ್.ಅಶೋಕ)**
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಹೂಲಗೇರಿ ಡಿ.ಎಸ್ (ಲಿಂಗಸುಗೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3180** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿ ಇತ್ತೀಚೆಗೆ ಸುರಿದ ಭಾರಿ ಮಳೆಯಿಂದ ಹಾನಿಗೊಳಗಾಗಿರುವ ಮನೆಗಳು ಎಷ್ಟು ; ಫಲಾನುಭವಿಗಳು ಎಷ್ಟು ; | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿ 2020-21 ನೇ ಸಾಲಿನಲ್ಲಿ ಭಾರಿ ಮಳೆಯಿಂದ ಒಟ್ಟು 396 ಸಂತ್ರಸ್ಥರ ಮನೆಗಳು ಹಾನಿಗೊಳಗಾಗಿರುವುದಾಗಿ ಜಿಲ್ಲಾಧಿಕಾರಿಗಳು ಅನುಮೋದಿಸಿರುತ್ತಾರೆ. ವಿವರ ಕೆಳಕಂಡಂತಿದೆ. |

| ಕ್ರ.ಸಂ. | ಹಾನಿಯಾದ ಮನೆ ವರ್ಗ | ಒಟ್ಟು ಮನೆಗಳು |
|---|---|---|
| 1 | ಸಂಪೂರ್ಣ | 0 |
| 2 | ಭಾಗಶಃ | 21 |
| 3 | ಅಲ್ಪಸ್ವಲ್ಪ | 375 |
| **ಒಟ್ಟು** | | **396** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಹಾನಿ ಆಗಿರುವ ಮನೆಗಳಿಗೆ ಸರ್ಕಾರದಿಂದ ಪರಿಹಾರ ಒದಗಿಸಲು ಕೈಗೊಂಡ ಕ್ರಮಗಳೇನು ; ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೂ ಎಷ್ಟು ಫಲಾನುಭವಿಗಳಿಗೆ ಪರಿಹಾರ ಒದಗಿಸಲಾಗಿದೆ ; (ಸಂಪೂರ್ಣ ವಿವರ ನೀಡುವುದು) | 2019 ನೇ ಸಾಲಿನಲ್ಲಿ ಉಂಟಾದ ನೆರೆ ಹಾವಳಿಯಿಂದ ಕಂದಾಯ ಇಲಾಖೆಯು ರಾಜ್ಯದ 25 ಜಿಲ್ಲೆಗಳಡಿ ಬರುವ 120 ತಾಲ್ಲೂಕುಗಳನ್ನು ಹಾಗೂ 2020 ನೇ ಸಾಲಿನಲ್ಲಿ ಉಂಟಾದ ನೆರೆ ಹಾವಳಿಯಿಂದ ರಾಜ್ಯದ 25 ಜಿಲ್ಲೆಗಳಡಿ ಬರುವ 180 ತಾಲ್ಲೂಕುಗಳನ್ನು ಪ್ರವಾಹ ಪೀಡಿತ ಪ್ರದೇಶಗಳೆಂದು ಘೋಷಿಸಿ ಆದೇಶ ಹೊರಡಿಸಿದೆ.<br><br>ಪ್ರವಾಹದಿಂದ ತೀವ್ರ ಹಾಗೂ ಭಾಗಶಃ ಮನೆ ಹಾನಿಯಾದ ಸಂತ್ರಸ್ಥರಿಗೆ ಕೇಂದ್ರ ಸರ್ಕಾರದ (NDRF/SDRF) ಮಾರ್ಗಸೂಚಿಯನ್ವಯ ಶೇ.15ರಷ್ಟು ಹಾನಿಯ ಮನೆಗೆ ರೂ.5200/-ಗಳು ಹಾಗೂ ತೀವ್ರ ಹಾಗೂ ಭಾಗಶಃ ಮನೆ ಹಾನಿಗೆ ರೂ.95,100/-ಗಳನ್ನು ನಿಗದಿಪಡಿಸಿದ್ದು, 2019-20 ನೇ ಸಾಲಿನ ನೆರೆ ಸಂತ್ರಸ್ಥರ ಪುನರ್ ವಸತಿ ಯೋಜನೆಯಡಿ ಸರ್ಕಾರ ಆದೇಶ ಸಂಖ್ಯೆ:ವಇ 78 ಹೆಚ್‌ಎಎಂ 2019, ದಿನಾಂಕ:14.08.2020, 16.09.2019 ಮತ್ತು ಸರ್ಕಾರ ಆದೇಶ ಸಂಖ್ಯೆ:ವಇ 121 ಹೆಚ್‌ಎಎಂ 2019, ದಿನಾಂಕ:18.10.2019, 17.01.2020, 10.02.2020 ಮತ್ತು 2020-21 ನೇ ಸಾಲಿನ ನೆರೆ ಸಂತ್ರಸ್ಥರ ಪುನರ್ ವಸತಿ ಯೋಜನೆಯಡಿ ಹೊರಡಿಸಲಾದ ಆದೇಶ ಸಂಖ್ಯೆ:ಕಂಇ 242 ಟಿಎನ್‌ಆರ್ 2020, ದಿನಾಂಕ:07.08.2020 ರಲ್ಲಿ ರಾಜ್ಯ ಸರ್ಕಾರವು ಸದರಿ ಮೊತ್ತವನ್ನು ಕೆಳಕಂಡಂತೆ ನಿಗದಿಪಡಿಸಿ ಆದೇಶ ಹೊರಡಿಸಿದೆ. |

| ಕ್ರ. ಸಂ. | ಹಾನಿಯಾದ ಮನೆಯ ವರ್ಗ | ಅಧಿಕೃತ/ ಅನಧಿಕೃತ ಮನೆ | ಘಟಕ ವೆಚ್ಚ (ಬಾಡಿಗೆ/ಶೆಡ್ ಒಳಗೊಂಡಂತೆ) (ರೂ.ಗಳಲ್ಲಿ) |
|---|---|---|---|
| 1 | ಸಂಪೂರ್ಣ | ಅಧಿಕೃತ | 5,50,000/- |

| | | | |
|---|---|---|---|
| | (ಎ) | ಅನಧಿಕೃತ (Insitue) | 1,00,000/- |
| | | ಅನಧಿಕೃತ (Relocation) | 5,50,000/- |
| 2 | ಭಾಗಶಃ - ಪುನರ್ ನಿರ್ಮಾಣ (ಬಿ2) | ಅಧಿಕೃತ | 5,50,000/- |
| | | ಅನಧಿಕೃತ (Insitue) | 1,00,000/- |
| | | ಅನಧಿಕೃತ (Relocation) | 5,50,000/- |
| | ಭಾಗಶಃ - ದುರಸ್ಥಿ(ಬಿ1) | ಅಧಿಕೃತ | 3,00,000/- |
| | | ಅನಧಿಕೃತ (Insitue) | 1,00,000/- |
| 3 | ಅಲ್ಪಸ್ವಲ್ಪ (ಸಿ) | ಅಧಿಕೃತ | 50,000/- |
| | | ಅನಧಿಕೃತ | 50,000/- |

2019-20 ಮತ್ತು 2020-21ನೇ ಸಾಲಿನಲ್ಲಿ ರಾಯಚೂರು ಜಿಲ್ಲೆಯ ಲಿಂಗಸುಗೂರು ವಿಧಾನಸಭಾ ಕ್ಷೇತ್ರದಲ್ಲಿ ಉಂಟಾದ ನೆರೆಹಾವಳಿಯಿಂದ ಹಾನಿಗೊಳಗಾದ ಮನೆಗಳ ಪುನರ್ ನಿರ್ಮಾಣ ಹಾಗೂ ದುರಸ್ಥಿಗಾಗಿ ಜಿ.ಪಿ.ಎಸ್ ಆಧಾರಿತ ಭೌತಿಕ ಪ್ರಗತಿಗನುಗುಣವಾಗಿ ಮನೆ ನಿರ್ಮಾಣ ಮಾಡಿಕೊಂಡು ಫಲಾನುಭವಿಗಳಿಗೆ ರಾಜೀವ್ ಗಾಂಧಿ ವಸತಿ ನಿಗಮದಿಂದ ರೂ. 96.25 ಲಕ್ಷ ಅನುದಾನ ಬಿಡುಗಡೆಯಾಗಿರುತ್ತದೆ.

| | | |
|---|---|---|
| (ಇ) | ಈ ಜಿಲ್ಲೆಯ ಲಿಂಗಸುಗೂರು ವಿಧಾನ ಸಭಾ ಕ್ಷೇತ್ರಕ್ಕೆ 2018-19 ರಿಂದ 2020-21 ನೇ ಸಾಲಿನವರೆಗೂ ವಾಜಪೇಯಿ ನಗರ ವಸತಿ ಯೋಜನೆ ಅಡಿಯಲ್ಲಿ ಮಂಜೂರಾಗಿರುವ ಮನೆಗಳು ಎಷ್ಟು ; | 2018-19ನೇ ಸಾಲಿಗೆ ವಾಜಪೇಯಿ ನಗರ ವಸತಿ ಯೋಜನೆಯಡಿ ಲಿಂಗಸೂಗೂರು ವಿಧಾನಸಭಾ ಕ್ಷೇತ್ರಕ್ಕೆ ಒಟ್ಟು 70 ಮನೆಗಳನ್ನು ಮಂಜೂರು ಮಾಡಲಾಗಿದ್ದು, ಸದರಿ ಗುರಿಗೆ ಎದುರಾಗಿ ಯಾವುದೇ ಫಲಾನುಭವಿಗಳನ್ನು ಆಯ್ಕೆ ಮಾಡಿರುವುದಿಲ್ಲವಾದ್ದರಿಂದ ಸರ್ಕಾರದ ಆದೇಶ ಸಂಖ್ಯೆ:ವಇ 12 ಹೆಚ್‌ಎಹೆಚ್ 2020, ದಿನಾಂಕ:19.05.2020 ರನ್ವಯ ವಿವಿಧ ವಸತಿ ಯೋಜನೆಗಳಡಿಯಲ್ಲಿ ಆಯ್ಕೆಯಾದ ಮತ್ತು ಆಯ್ಕೆಯಾಗಿ ವಿವಿಧ ಲಾಗಿನ್ ಹಂತದಲ್ಲಿರುವ ಹಾಗೂ ನಿಗದಿತ ಸಮಯದೊಳಗೆ ಪ್ರಾರಂಭ ಮಾಡಿಕೊಳ್ಳದೇ ಇರುವ ಮನೆಗಳನ್ನು ಬ್ಲಾಕ್ ಮಾಡಲಾಗಿರುತ್ತದೆ. 2020-21ನೇ ಸಾಲಿಗೆ ಸರ್ಕಾರವು ಯಾವುದೇ ಗುರಿಯನ್ನು ನಿಗದಿ ಪಡಿಸಿರುವುದಿಲ್ಲ. |
| (ಈ) | ಈ ಕ್ಷೇತ್ರಕ್ಕೆ ಅನುಷ್ಠಾನಗೊಳಿಸಿರುವ ವಿವಿಧ ವಸತಿ ಯೋಜನೆಗಳಾವುವು ? | ಲಿಂಗಸುಗೂರು ವಿಧಾನಸಭಾ ಕ್ಷೇತ್ರದಲ್ಲಿ ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ, ಬಡತನ ರೇಖೆಗಿಂತ ಕೆಳಗಿರುವ ವಸತಿರಹಿತ ಕುಟುಂಬಗಳಿಗೆ ವಸತಿ ಸೌಕರ್ಯ ಒದಗಿಸಲು ರಾಜೀವ್‌ಗಾಂಧಿ ವಸತಿ ನಿಗಮದಿಂದ ಈ ಕೆಳಕಂಡ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>1. ಬಸವ ವಸತಿ ಯೋಜನೆ<br>2. ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ ಹಾಗೂ ನಗರ)<br>3. ದೇವರಾಜು ಅರಸು ಯೋಜನೆ (ಗ್ರಾಮೀಣ ಹಾಗೂ ನಗರ)<br>4. ವಾಜಪೇಯಿ ನಗರ ವಸತಿ ಯೋಜನೆ<br>5. ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ ಹಾಗೂ ನಗರ)(ಕೇಂದ್ರಸರ್ಕಾರಪುರಸ್ಕೃತ) |

ಸಂಖ್ಯೆ :ವಇ 146 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಹೂಲಗೇರಿ .ಡಿ.ಎಸ್ (ಲಿಂಗಸುಗೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3183** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಮೂರು ವರ್ಷಗಳಿಂದ ರಾಯಚೂರು ಜಿಲ್ಲೆಯ ಲಿಂಗಸಗೂರು ವಿಧಾನ ಸಭಾ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಯಡಿಯಲ್ಲಿ ಮಂಜೂರಾಗಿರುವ ಮನೆಗಳು ಎಷ್ಟು ; ಇದರಲ್ಲಿ ಮಂಜೂರಾತಿ ಆಗಿ ರದ್ದತಿಯಾಗಿರುವ ಮನೆಗಳು (ಬ್ಲಾಕ್) ಎಷ್ಟು ; | 2017-18 ರಿಂದ ಇಲ್ಲಿಯವರೆಗೆ ರಾಯಚೂರು ಜಿಲ್ಲೆಯ ವಿಧಾನ ಸಭಾ ಕ್ಷೇತ್ರಕ್ಕೆ ಒಟ್ಟು 6280 ಮನೆಗಳು ಮಂಜೂರಾಗಿದ್ದು, ನಿಗಧಿತ ಅವಧಿಯಲ್ಲಿ ಪ್ರಾರಂಭ ಮಾಡಿ ಕೊಳ್ಳದಿದ್ದರಿಂದ ಒಟ್ಟು 653 ಮನೆಗಳು (ಬ್ಲಾಕ್) ರದ್ದಾಗಿರುತ್ತದೆ. |
| (ಆ) | ರದ್ದಾಗಿರುವ ಮನೆಗಳ ಪೈಕಿ ಯಾವ ಆದೇಶದ ಮೇರೆಗೆ ಮನೆಗಳ ರದ್ದತಿಯನ್ನು ತೆರವುಗೊಳಿಸಲಾಗಿದೆ ; ಸದರಿ ಮನೆಗಳು ಎಷ್ಟು ; | ನಿಗಧಿತ ಸಮಯದಲ್ಲಿ ಕಾಮಗಾರಿಯನ್ನು ಪ್ರಾರಂಭ ಮಾಡಿ ಕೊಳ್ಳದ ಮನೆಗಳನ್ನು ಬ್ಲಾಕ್ ಮಾಡಲಾಗಿತ್ತು. ಪ್ರಸ್ತುತ ಸರ್ಕಾರವು ಅಸ್ತಿತ್ವಕ್ಕೆ ಬಂದ ನಂತರ ಜನ ಪ್ರತಿನಿಧಿಗಳ ಕೋರಿಕೆಯಂತೆ ಸರಕಾರವು ದಿನಾಂಕ:14.02.2020 ರಂದು ಆದೇಶ ಹೊರಡಿಸಿ ವಿವಿಧ ವಸತಿ ಯೋಜನೆಗಳಡಿ ನಿಗಧಿತ ಸಮಯದಲ್ಲಿ ಪ್ರಾರಂಭಗೊಳ್ಳದೇ ಬ್ಲಾಕ್ ಆಗಿದ್ದ ಮನೆಗಳನ್ನು ತೆರವುಗೊಳಿಸಿ, ವಾಸ್ತವವಾಗಿ ಪ್ರಾರಂಭವಾಗಿರುವ ಮನೆಗಳ ಛಾಯಾಚಿತ್ರಗಳನ್ನು ಜಿಪಿಎಸ್ ಗೆ ಅಳವಡಿಸಲು ಒಂದೂವರೆ ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಜಿ.ಪಿ.ಎಸ್. ಮಾಡಿರುವ ಫಲಾನುಭವಿಗಳನ್ನು ಪ್ರಗತಿಗೆ ಪರಿಗಣಿಸಿ, ಸರ್ಕಾರದ ಆದೇಶ ಸಂ:ವಇ 12 ಹೆಚ್‌ಎಹೆಚ್ 2020, ದಿನಾಂಕ :19.05.2020 ರಂತೆ ಉಳಿದ ಮನೆಗಳನ್ನು ರದ್ದುಪಡಿಸಲಾಗಿದೆ. |
| (ಇ) | ಆಧಾರ ಮತ್ತು ಬಿ.ಪಿ.ಎಲ್ ಕಾರ್ಡ್ ತಾಂತ್ರಿಕ ಸಮಸ್ಯೆಗಳಿಂದಾಗಿ ಅನುದಾನ ಬಿಡುಗಡೆಯಾಗದೇ ಫಲಾನುಭವಿಗಳಿಗೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ ಸಮಸ್ಯೆಯನ್ನು ಪರಿಹರಿಸಲು ಸರ್ಕಾರ ತೆಗೆದು ಕೊಂಡ ಕ್ರಮಗಳೇನು ; | ವಿವಿಧ ವಸತಿ ಯೋಜನೆಯಡಿ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ಜಿ.ಪಿ.ಎಸ್ ಆಧಾರಿತ ಪ್ರಗತಿಗನುಗುಣವಾಗಿ ಅನುದಾನವನ್ನು ಬಿಡುಗಡೆಗೊಳಿ-ಸಲಾಗುತ್ತಿದೆ. ಆದ್ದರಿಂದ ಫಲಾನುಭವಿಗಳ ಆಧಾರ್ ಅಳವಡಿಸುವುದು ಕಡ್ಡಾಯವಾಗಿರುತ್ತದೆ. ಫಲಾನುಭವಿಗಳು ಆಧಾರ ಮತ್ತು ಬ್ಯಾಂಕ್ ಖಾತೆಯ ಹೆಸರಿನಲ್ಲಿ ವ್ಯತ್ಯಾಸವಿದ್ದಂತಹ ಪ್ರಕರಣಗಳಲ್ಲಿ ಗ್ರಾಮ ಪಂಚಾಯಿತಿಯ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗೆ ಲಾಗಿನ್‌ನಲ್ಲಿ ತಿದ್ದುಪಡಿಗೆ ಅವಕಾಶ ನೀಡಲಾಗಿದೆ. |

| | | |
|---|---|---|
| (ಈ) | ಈ ಕ್ಷೇತ್ರಕ್ಕೆ 2016-17 ಮತ್ತು 2017-18 ನೇ ಸಾಲಿನಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ ಅಡಿಯಲ್ಲಿ ಮಂಜೂರಾಗಿರುವ ಮನೆಗಳು ಎಷ್ಟು; ಮಂಜೂರಾಗಿ ನಿರ್ಮಾಣವಾಗಿರುವ ಮನೆಗಳಿಗೆ ಅನುದಾನ ಬಿಡುಗಡೆಯಾಗದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಲ್ಲಿ ಕೇಂದ್ರ ಸರ್ಕಾರದ ಅನುದಾನ ಎಷ್ಟು? | ಲಿಂಗಸೂಗೂರು ಕ್ಷೇತ್ರಕ್ಕೆ 2016-17 ಮತ್ತು 2017-18 ನೇ ಸಾಲಿನಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ) ಅಡಿಯಲ್ಲಿ ಒಟ್ಟು 3945 ಮನೆಗಳು ಮಂಜೂರಾಗಿರುತ್ತದೆ. ಮಂಜೂರಾದ ಮನೆಗಳಿಗೆ ಜಿ.ಪಿ.ಎಸ್ ಆಧಾರದ ಭೌತಿಕ ಪ್ರಗತಿಯ ಆಧಾರದ ಮೇಲೆ ಫಲಾನುಭವಿಗಳಿಗೆ ಒಟ್ಟು ರೂ.44.58 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ) ಅಡಿಯಲ್ಲಿ ಮನೆಗಳ ಘಟಕ ವೆಚ್ಚ ರೂ.1.20 ಲಕ್ಷಗಳಾಗಿದ್ದು, ಈ ಮೊತ್ತದಲ್ಲಿ ಕೇಂದ್ರ ಸರ್ಕಾರ ರೂ.0.48 ಲಕ್ಷಗಳು ಹಾಗೂ ರಾಜ್ಯ ಸರ್ಕಾರ ರೂ.0.72 ಲಕ್ಷಗಳು ಸೇರಿರುತ್ತದೆ ಹಾಗೂ ಪ್ರಧಾನ ಮಂತ್ರಿ ಆವಾಸ್ ನಗರ ಯೋಜನೆಯಡಿ ಮನೆಗಳ ಘಟಕ ವೆಚ್ಚ ರೂ.1.50 ಲಕ್ಷಗಳಾಗಿದ್ದು, ಈ ಸಂಪೂರ್ಣ ಮೊತ್ತವನ್ನು ಕೇಂದ್ರ ಸರ್ಕಾರದಿಂದ ಭರಿಸಲಾಗುತ್ತಿದೆ. ಯೋಜನಾವಾರು ವಿವರ ಕೆಳಕಂಡಂತಿದೆ. |

(ರೂ. ಕೋಟಿಗಳಲ್ಲಿ)

| ಯೋಜನೆ | ಶ್ರೇಣಿ | ಮಂಜೂರಾಗಿರುವ ಮನೆಗಳ ಸಂಖ್ಯೆ | ಬಿಡುಗಡೆಯಾದ ಅನುದಾನ |
|---|---|---|---|
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 2016-17 | 1874 | 21.55 |
| | 2017-18 | 2071 | 23.03 |
| **ಒಟ್ಟು** | | **3945** | **44.58** |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 2016-17 | 622 | 0.7012 |
| | 2017-18 | | |
| **ಒಟ್ಟು** | | **622** | **0.7012** |

ಸಂಖ್ಯೆ :ವಇ 147 ಹೆಚ್‌ಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3185 |
| ಮಾನ್ಯ ಸದಸ್ಯರ ಹೆಸರು | ಶ್ರೀ ರೇವಣ್ಣ ಎಚ್. ಡಿ. (ಹೊಳೇನರಸೀಪುರ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಮಾನ್ಯ ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಸಚಿವರು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಜಿಲ್ಲಾ ಪಂಚಾಯಿತಿ ವತಿಯಿಂದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿ ನಿಲಯಗಳಿಗೆ ಅಡುಗೆಯವರು, ಅಡುಗೆ ಸಹಾಯಕರು ಮತ್ತು ರಾತ್ರಿ ಕಾವಲುಗಾರರ ಸಿಬ್ಬಂದಿಗಳ ಸೇವೆಯನ್ನು ಒದಗಿಸಲು ಹೊರಸಂಪನ್ಮೂಲ ಎಜೆನ್ಸಿಯವರಿಗೆ ಟೆಂಡರ್ ನಿಬಂಧನೆಗಳಿಗೊಳಪಟ್ಟು ಕಾರ್ಯಾದೇಶವನ್ನು ನೀಡಿರುವುದು ನಿಜವೇ ; | ಹೌದು |
| ಆ) | ಕಾರ್ಯಾದೇಶದಲ್ಲಿನ ಷರತ್ತಿನನ್ವಯ ಮುಂಗಡವಾಗಿ ಕನಿಷ್ಠ 2 ಮಾಹೆಗಳಿಗೆ ಕನಿಷ್ಠ ವೇತನ ಕಾಯ್ದೆಯನ್ವಯ ಸಂದಾಯವಾಗಬೇಕಾದ ವೇತನವನ್ನು ಸಂಬಂಧಿಸಿದ ಸಿಬ್ಬಂದಿಗಳ ಬ್ಯಾಂಕ್ ಖಾತೆಗೆ ಇ.ಸಿ.ಎಸ್ ಅಥವಾ ಆರ್.ಟಿ.ಜಿ.ಎಸ್. ಮೂಲಕ ಪ್ರತಿ ತಿಂಗಳು 5ನೇ ದಿನಾಂಕದೊಳಗೆ ಪಾವತಿಸಬೇಕಾಗಿರುವುದು ನಿಜವೇ ; | ಹೌದು |
| ಇ) | ಸರ್ಕಾರದಿಂದ ನಿಗದಿತ ಅನುದಾನ ಬಿಡುಗಡೆಯಾಗದಿರುವುದರಿಂದ 4-5 ತಿಂಗಳಾದರೂ ಸದರಿ ಸಿಬ್ಬಂದಿಗಳಿಗೆ ವೇತನ ಪಾವತಿಸದೇ ಸಿಬ್ಬಂದಿಗಳ ಜೀವನ ನಿರ್ವಹಣೆಗೆ ತುಂಬಾ ತೊಂದರೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಕೋವಿಡ್-19 ರ ಪೂರ್ವದಲ್ಲಿ ಮಾರ್ಚ್ 2020ರ ವರೆಗೂ ಹೊರ ಸಂಪನ್ಮೂಲ ಸಿಬ್ಬಂದಿಗಳಿಗೆ ವೇತನ ಪಾವತಿಸಲಾಗಿರುತ್ತದೆ..<br><br>ಮುಂದುವರೆದು, ಹೊರ ಸಂಪನ್ಮೂಲ ಸಿಬ್ಬಂದಿಗಳಿಗೆ ವೇತನ ಪಾವತಿಸುವ ಸಂಬಂಧ ಆರ್ಥಿಕ ಇಲಾಖೆಯು ಸುತ್ತೋಲೆ ದಿ: 10.06.2020 ರನ್ವಯ ಲಾಕ್ ಡೌನ್ ಅವಧಿಗೆ ದಿ: 24.03.2020 ರಿಂದ 18.05.2020 ರ ವರೆಗೆ ವೇತನ ಪಾವತಿಸಲಾಗಿರುತ್ತದೆ. |

| | | |
|---|---|---|
| | | ನಂತರದ ಅವಧಿಗೆ ವೇತನ ಪಾವತಿಸುವ ಸಂಬಂಧ ಆರ್ಥಿಕ ಇಲಾಖೆಯು ಈ ಕೆಳಕಂಡಂತೆ ನಿರ್ದೇಶನ ನೀಡಿರುತ್ತದೆ.<br>➢ ಸಕ್ಷಮ ಪ್ರಾಧಿಕಾರದಿಂದ ಕ್ವಾರಂಟೈನ್ ಸೆಂಟರ್ ಗಳಾಗಿ ಪರಿವರ್ತನೆಯಾಗಿದ್ದು, ಅಲ್ಲಿ ಕಾರ್ಯನಿರ್ವಹಿಸಲು ಸೂಚಿಸಲಾಗಿದ್ದ ಹೊರಸಂಪನ್ಮೂಲ ಸಿಬ್ಬಂದಿಗಳಿಗೆ ವೇತನ ಪಾವತಿಸುವುದು.<br>➢ ಶೈಕ್ಷಣಿಕ ಸಂಸ್ಥೆಗಳ ಆರಂಭದಿಂದ ಯಾವ ವಿದ್ಯಾರ್ಥಿ ನಿಲಯಗಳು ಕಾರ್ಯನಿರ್ವಹಿಸುತ್ತಿವೆಯೋ ಅಂತಹ ವಿದ್ಯಾರ್ಥಿ ನಿಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊರಸಂಪನ್ಮೂಲ ಸಿಬ್ಬಂದಿಗಳಿಗೆ ವಿದ್ಯಾರ್ಥಿ ನಿಲಯಗಳು ಆರಂಭವಾದ ದಿನಾಂಕದಿಂದ ವೇತನ ಪಾವತಿಸುವುದು<br>ಮೇಲ್ಕಂಡ ನಿರ್ದೇಶನದಂತೆ ಹೊರಸಂಪನ್ಮೂಲ ಸಿಬ್ಬಂದಿಗಳಿಗೆ ವೇತನ ಪಾವತಿಸಲಾಗಿದೆ. |
| **ಈ)** | ಹಾಗಿದ್ದಲ್ಲಿ, ಸಿಬ್ಬಂದಿಗೆ ಕೂಡಲೇ ವೇತನವನ್ನು ಪಾವತಿಸುವ ಸಂಬಂಧ ಸರ್ಕಾರ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಮುಖೇನ ಹಣ ಬಿಡುಗಡೆಗೊಳಿಸಲು ಕೈಗೊಂಡಿರುವ ಕ್ರಮಗಳೇನೆ ? (ಸಂಪೂರ್ಣ ಮಾಹಿತಿ ನೀಡುವುದು) | ಆರ್ಥಿಕ ಇಲಾಖೆಯು ನೀಡಿರುವ ನಿರ್ದೇಶನದಂತೆ ವೇತನ ಪಾವತಿಸಲಾಗಿರುತ್ತದೆ. |

**ಸಂಖ್ಯೆ:ಹಿಂವಕ 87 ಬಿಇಟಿ 2021**

**(ಕೋಟ ಶ್ರೀನಿವಾಸ ಪೂಜಾರಿ)**
**ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ**
**ಕಲ್ಯಾಣ ಇಲಾಖಾ ಸಚಿವರು**

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀಮತಿ ಕುಸುಮಾವತಿ ಚನ್ನಬಸಪ್ಪ ಶಿವಳ್ಳಿ (ಕುಂದಗೋಳ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3194** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 2019-20 ಮತ್ತು 2020-21 ನೇ ಸಾಲಿನಲ್ಲಿ ಕುಂದಗೋಳ ವಿಧಾನ ಸಭೆ ಕ್ಷೇತ್ರದಲ್ಲಿ ಹಾನಿಯಾದ ಮನೆಗಳೆಷ್ಟು ; | ಕಳೆದ 2019-20 ಮತ್ತು 2020-21 ನೇ ಸಾಲಿನಲ್ಲಿ ಕುಂದಗೋಳ ವಿಧಾನ ಸಭಾ ಕ್ಷೇತ್ರದಲ್ಲಿ ಒಟ್ಟು 5871 ಮನೆಗಳು ಹಾನಿಗೊಳಗಾಗಿರುವುದಾಗಿ ಜಿಲ್ಲಾಧಿಕಾರಿಗಳು ಅನುಮೋದಿಸಿದ್ದು, ವರ್ಗವಾರು ವಿವರ ಕೆಳಕಂಡಂತಿದೆ. |
| (ಆ) | ಇದರಲ್ಲಿ A, B ಮತ್ತು C ಕೆಟಗರಿ ಮನೆಗಳ ಸಂಖ್ಯೆ ಎಷ್ಟು ; ಹಾನಿಯಾಗಿದ್ದ ಮನೆಗಳಿಗೆ ನೀಡಿದ ಪರಿಹಾರ ಎಷ್ಟು ; (ಸಂಪೂರ್ಣ ಮಾಹಿತಿ ನೀಡುವುದು) | |

| ಹಾನಿಯಾದ ಮನೆ ವರ್ಗ | | 2019-20 | 2020-21 | ಒಟ್ಟು |
|---|---|---|---|---|
| ಸಂಪೂರ್ಣ (ಎ) | ಅಧಿಕೃತ | 8 | 0 | 8 |
| ಭಾಗಶಃ (ಪುನರ್ ನಿರ್ಮಾಣ) (ಬಿ2) | ಅಧಿಕೃತ | 104 | 25 | 143 |
| ಭಾಗಶಃ (ದುರಸ್ತಿ) (ಬಿ1) | ಅಧಿಕೃತ | 14 | | |
| ಅಲ್ಪಸ್ವಲ್ಪ (ಸಿ) | ಅಧಿಕೃತ | 5328 | 392 | 5720 |
| **ಒಟ್ಟು** | | **5454** | **417** | **5871** |

2019-20 ಮತ್ತು 2020-21 ನೇ ಸಾಲಿನಲ್ಲಿ ಧಾರವಾಡ ಜಿಲ್ಲೆಯ ಕುಂದಗೋಳ ವಿಧಾನಸಭಾ ಕ್ಷೇತ್ರದಲ್ಲಿ ಉಂಟಾದ ನೆರೆಹಾವಳಿಯಿಂದ ಹಾನಿಗೊಳಗಾದ ಮನೆಗಳ ಪುನರ್ ನಿರ್ಮಾಣ ಹಾಗೂ ದುರಸ್ತಿಗಾಗಿ ರಾಜೀವ್ ಗಾಂಧಿ ವಸತಿ ನಿಗಮದಿಂದ ರೂ.749.87 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದ್ದು, ವರ್ಗಾವಾರು ವಿವರ ಈ ಕೆಳಗಿನಂತಿದೆ:

(ರೂ.ಲಕ್ಷಗಳಲ್ಲಿ)

| ಹಾನಿಯಾದ ಮನೆ ವರ್ಗ | | 2019-20 | 2020-21 | ಒಟ್ಟು |
|---|---|---|---|---|
| ಸಂಪೂರ್ಣ (ಎ) | ಅಧಿಕೃತ | 34.60 | 0.00 | 34.60 |
| ಭಾಗಶಃ (ಪುನರ್ ನಿರ್ಮಾಣ) (ಬಿ2) | ಅಧಿಕೃತ | 466.03 | 29.00 | 515.73 |
| ಭಾಗಶಃ (ದುರಸ್ತಿ) (ಬಿ1) | ಅಧಿಕೃತ | 20.70 | | |
| ಅಲ್ಪಸ್ವಲ್ಪ (ಸಿ) | ಅಧಿಕೃತ | 122.79 | 76.75 | 199.54 |
| **ಒಟ್ಟು** | | **644.12** | **105.75** | **749.87** |

2019-20 ನೇ ಸಾಲಿನ ನೆರೆ ಸಂತ್ರಸ್ಥರ ಪುನರ್ವಸತಿ ಯೋಜನೆಯಡಿ ಪ್ರಾರಂಭಿಕ ಹಂತದಲ್ಲಿ ರಾಜೀವ್ ಗಾಂಧಿ

| | | |
|---|---|---|
| | | ವಸತಿ ನಿಗಮದಿಂದ ಅನುದಾನ ಬಿಡುಗಡೆ ಮಾಡಲಾಗಿದ್ದು, ನಂತರದಲ್ಲಿ ಜಿಲ್ಲಾಧಿಕಾರಿಗಳ ಹಂತದಲ್ಲಿಯೇ ಪರಿಹಾರ ವಿತರಿಸಲಾಗಿದೆ. |
| (ಇ) | C ಯಿಂದ A ಮತ್ತು B ಗೆ ವರ್ಗಾವಣೆ ಆಗಿರುವ ಪ್ರಕರಣಗಳೆಷ್ಟು; ಬಾಕಿ ಉಳಿದಿರುವ ಮನೆಗಳೆಷ್ಟು; ಬಾಕಿ ಉಳಿದಿರುವ ಮನೆಗಳಿಗೆ ಪರಿಹಾರ ನೀಡಲಾಗುವುದೇ; ಇಲ್ಲವಾದಲ್ಲಿ ಕಾರಣಗಳೇನು ? | ಧಾರವಾಡ ಜಿಲ್ಲೆಯ ಜಿಲ್ಲಾಧಿಕಾರಿಗಳು ದಿನಾಂಕ: 05.11.2019 ರಂದು ಹುಬ್ಬಳ್ಳಿ, ಧಾರವಾಡ ಮಹಾನಗರ - ಪಾಲಿಕೆಯಲ್ಲಿ 2019 ನೇ ಸಾಲಿನ ನೆರೆ ಸಂತ್ರಸ್ಥರ ಪುನರ್ ವಸತಿ ಯೋಜನೆಯಡಿ ಆಯ್ಕೆಯಾಗಿರುವ ಒಬ್ಬ ಫಲಾನುಭವಿಯ ಮನೆಯನ್ನು "ಸಿ" ವರ್ಗದಿಂದ "ಎ" ವರ್ಗಕ್ಕೆ ವರ್ಗಾಹಿಸಲು ಕೋರಿದ್ದು, ಸದರಿ ಫಲಾನುಭವಿಯ ಮನೆಯ ವರ್ಗವನ್ನು ಬದಲಾಯಿಸಿ ಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಸದರಿ ಜಿಲ್ಲಾಧಿಕಾರಿಗಳು ದಿನಾಂಕ: 20.08.2020 ಮತ್ತು 26.08.2020 ರಂದು 2019 ನೇ ಸಾಲಿನ ನೆರೆ ಸಂತ್ರಸ್ಥರ ಪುನರ್ ವಸತಿ ಯೋಜನೆಯಡಿ ನವಲಗುಂದ ಮತ್ತು ಹುಬ್ಬಳ್ಳಿ ತಾಲ್ಲೂಕಿನಲ್ಲಿ "ಸಿ" ವರ್ಗದಡಿ ಆಯ್ಕೆಯಾಗಿರುವ ಒಟ್ಟು 12 ಫಲಾನುಭವಿಗಳ ಮನೆಗಳನ್ನು "ಬಿ" ವರ್ಗಕ್ಕೆ ವರ್ಗಾಹಿಸಲು ಕೋರಿದ್ದು, ಸರ್ಕಾರವು ಆದೇಶ ಸಂಖ್ಯೆ:ವಇ 163 ಹೆಚ್‌ಎಎಂ 2019(ಭಾಗ-1), ದಿನಾಂಕ:21.08.2020 ರಲ್ಲಿ 2019ನೇ ಸಾಲಿನಲ್ಲಿ ಉಂಟಾದ ನೆರೆ ಹಾವಳಿಯಿಂದ ಹಾನಿಗೊಳಗಾದ ಮನೆಗಳ ಪ್ರಸ್ತಾವನೆ/ತಿದ್ದುಪಡಿ ಸಲ್ಲಿಸುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಗಿತಗೊಳಿಸಲಾಗಿರುವುದಾಗಿ ಮತ್ತು ಸರ್ಕಾರದ ಆದೇಶ ಸಂಖ್ಯೆ:ಕಂಇ 242 ಟಿಎನ್‌ಆರ್ 2020, ದಿನಾಂಕ: 01.01.2021 ರಲ್ಲಿ 2020-21 ನೇ ಸಾಲಿನಲ್ಲಿ ಉಂಟಾದ ನೆರೆ ಹಾವಳಿಯಿಂದ ಹಾನಿಗೊಳಗಾದ ಮನೆಗಳ ನಿಗಧಿತ ವರ್ಗ ದಾಖಲಾದ್ದಲ್ಲಿ ಸದರಿ ವಿವರಗಳನ್ನು ಬದಲಿಸತಕ್ಕದ್ದಲ್ಲ ಎಂದು ಆದೇಶಿಸಿರುವ ಹಿನ್ನಲೆಯನ್ನು ರಾಜೀವ್ ಗಾಂಧಿ ವಸತಿ ನಿಗಮದಲ್ಲಿ "ಸಿ" ವರ್ಗದ ಮನೆಗಳನ್ನು "ಎ" ಮತ್ತು "ಬಿ" ವರ್ಗಕ್ಕೆ ವರ್ಗಾಹಿಸಲು ಜಿಲ್ಲಾಧಿಕಾರಿಗಳ ಲಾಗಿನ್‌ಗೆ ಅವಕಾಶ ಕಲ್ಪಿಸಿರುವುದಿಲ್ಲ.<br><br>ಕುಂದಗೋಳ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರಸ್ತುತ "ಸಿ" ವರ್ಗದ ಮನೆಗಳನ್ನು "ಎ" ಮತ್ತು "ಬಿ" ವರ್ಗಕ್ಕೆ ವರ್ಗಾಹಿಸಲು ಯಾವುದೇ ಪ್ರಕರಣಗಳು ಬಾಕಿ ಇರುವುದಿಲ್ಲ.<br><br>ನೆರೆ ಹಾವಳಿಯಿಂದ ಹಾನಿಗೊಳಗಾಗಿರುವ ಮನೆಗಳಿಗೆ ಜಿಲ್ಲಾಧಿಕಾರಿಗಳು ದೃಢೀಕರಿಸಿ, ಅನುಮೋದಿಸಿದ ಅರ್ಹ ಫಲಾನುಭವಿಗಳು ನಿರ್ಮಿಸಿರುವ ಮನೆಗಳ ವಿವಿಧ ಹಂತಗಳನ್ನು ಪಂಚಾಯಿತಿ ಅಭಿವದ್ಧಿ ಅಧಿಕಾರಿಗಳು/ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳು ಆನ್‌ಲೈನ್‌ಗೆ ಅಪ್ಲೋಡ್ ಮಾಡಿದ ಜಿಪಿಎಸ್ ಛಾಯಾಚಿತ್ರಗಳನ್ನು ತಹಶೀಲ್ದಾರ್ ರವರು ಪರಿಶೀಲಿಸಿ, ಅರ್ಹಗೊಳಿಸಿ, ಅನುದಾನ ದೃಢೀಕರಣ (Payment Certification) ನೀಡಿದ ಪ್ರಗತಿಯಲ್ಲಿರುವ ಎಲ್ಲಾ ಮನೆಗಳಿಗೆ ಕಾಲಕಾಲಕ್ಕೆ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. |

ಸಂಖ್ಯೆ :ವಇ 149 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3207
ಸದಸ್ಯರ ಹೆಸರು : ಮಂಜುನಾಥ್ ಎ. (ಮಾಗಡಿ)
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ ತಾಲ್ಲೂಕು, ಬಿಡದಿ ಹೋಬಳಿ, ಶ್ಯಾನುಮಂಗಲ, ಬಿಲ್ಲಕೆಂಪನಹಳ್ಳಿ ಮತ್ತು ಬಾನಂದೂರು ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಮೆ:ಚಾಮುಂಡೇಶ್ವರಿ ಬಿಲ್ಡ್‌ಟೆಕ್ಸ್ ಪ್ರೈಮೇಟ್ ಲಿಮಿಟೆಡ್, ಸಂಸ್ಥೆಯವರು ಅನಧಿಕೃತವಾಗಿ ಜಮೀನನ್ನು ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಮನಗರ ತಾಲ್ಲೂಕು, ಬಿಡದಿ ಹೋಬಳಿ, ಶ್ಯಾನುಮಂಗಲ, ಬಿಲ್ಲಕೆಂಪನಹಳ್ಳಿ ಮತ್ತು ಬಾನಂದೂರು ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಮೆ:ಚಾಮುಂಡೇಶ್ವರಿ ಬಿಲ್ಡ್‌ಟೆಕ್ ಪ್ರೈವೇಟ್ ಲಿಮಿಟೆಡ್ ಸಂಸ್ಥೆಯವರು ಅನಧಿಕೃತವಾಗಿ ಜಮೀನನ್ನು ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಹಾಗಿದ್ದಲ್ಲಿ, ಎಷ್ಟು ಎಕರೆ ಜಮೀನನ್ನು ಒತ್ತುವರಿ ಮಾಡಿಕೊಳ್ಳಲಾಗಿದೆ; (ಸರ್ವೆ ನಂಬರುವಾರುಮಾಹಿತಿ ನೀಡುವುದು) | ಒಟ್ಟು 77-19 ಎ/ಗುಂ ಸರ್ಕಾರಿ ಜಮೀನನ್ನು ಒತ್ತುವರಿ ಮಾಡಿಕೊಳ್ಳಲಾಗಿದ್ದು, ವಿವರ ಕೆಳಕಂಡಂತಿದೆ |

| ಗ್ರಾಮ | ಸ.ನಂ | ವಿಸ್ತೀರ್ಣ ಎ/ಗುಂ |
|---|---|---|
| ಶ್ಯಾನುಮಂಗಲ | 83 | 48-05 |
| ಬಿಲ್ಲಕೆಂಪನಹಳ್ಳಿ | 20 | 7-08 |
| ಶ್ಯಾನುಮಂಗಲ | ಖರೀದಿಸಲಾದ ವಿವಿಧ ಹಿಡುವಳಿ ಸ.ನಂಗಳಲ್ಲಿನ ಭೂ ಪರಿವರ್ತಿತ – ಎ-ಖರಾಬು | 5-21 |
| | ಖರೀದಿಸಲಾದ ವಿವಿಧ ಹಿಡುವಳಿ ಸ.ನಂ.ಗಳಲ್ಲಿನ- ಬಿ-ಖರಾಬು | 9-01 |
| ಬಿಲ್ಲಕೆಂಪನಹಳ್ಳಿ | ಖರೀದಿಸಲಾದ ವಿವಿಧ ಹಿಡುವಳಿ ಸ.ನಂ.ಗಳಲ್ಲಿನ ಬಿ-ಖರಾಬು | 1-21 |
| ಡಿ.ಜಿ.ಪಿ.ಎಸ್ ಸರ್ವೆ ವ್ಯತ್ಯಾಸ | | 6-03 |
| | ಒಟ್ಟು | 77-19 |

| | | |
|---|---|---|
| ಇ) | ಮೇಲ್ಕಂಡ ಸರ್ವೆ ನಂಬರುಗಳ ಒತ್ತುವರಿ ಜಮೀನಿಗೆ ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಮಾರುಕಟ್ಟೆ ಮೌಲ್ಯವನ್ನು ಪಾವತಿಸಲಾಗಿದೆಯೇ (ಸಂಪೂರ್ಣ ಮಾಹಿತಿ ನೀಡುವುದು) | ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶ ಮತ್ತು ಸರ್ಕಾರದ ಆದೇಶದನ್ವಯ 77-19 ಎ/ಗುಂ ಒತ್ತುವರಿ ಜಮೀನಿಗೆ ಒಟ್ಟಾರೆ ರೂ.9,82,07,77,480/- ಗಳ ಮಾರುಕಟ್ಟೆ ಮೌಲ್ಯವನ್ನು ಪಾವತಿಸುವಂತೆ ಸಂಸ್ಥೆಗೆ ಹಿಂಬರಹದ ಮೂಲಕ ತಿಳಿಸಲಾಗಿದ್ದು, ಸಂಸ್ಥೆಯು ಈವರೆಗೆ ಸದರಿ ಮೊತ್ತವನ್ನು ಸರ್ಕಾರಕ್ಕೆ ಪಾವತಿಸಿರುವುದಿಲ್ಲ. ಬದಲಿಗೆ ಸರ್ಕಾರದ ಆದೇಶ ಹಾಗೂ ಹಿಂಬರಹವನ್ನು ಪ್ರಶ್ನಿಸಿ ಸಂಸ್ಥೆಯು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ:38312/2017 ರಂತೆ ಪ್ರಕರಣ ದಾಖಲಿಸಿದ್ದು, ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ. |
| ಈ) | ಬಾನಂದೂರು ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿ ಒತ್ತುವರಿಯಾಗಿರುವ ಒಟ್ಟು 28 ಎಕರೆ 0.33 ಗುಂಟೆ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗಿದೆಯೇ; | ಹೌದು. |
| ಉ) | ವಶಕ್ಕೆ ಪಡೆಯಲಾದ ಈ ಜಮೀನನ್ನು ಯಾವ ಯಾವ ಉದ್ದೇಶಗಳಿಗೆ ಮೀಸಲಿಡಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ವಶಕ್ಕೆ ಪಡೆಯಲಾದ ಜಮೀನನ್ನು ಯಾವುದೇ ಉದ್ದೇಶಕ್ಕೆ ಮೀಸಲಿಟ್ಟಿರುವುದಿಲ್ಲ. |

**ಸಂಖ್ಯೆ: ಆರ್‌ಡಿ 68 ಎಲ್‌ಜಿಕ್ಯೂ 2021**

**(ಆರ್. ಅಶೋಕ)**
**ಕಂದಾಯ ಸಚಿವರು.**

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3209

ಸದಸ್ಯರ ಹೆಸರು : ಶ್ರೀ ಮಂಜುನಾಥ್ ಎ. (ಮಾಗಡಿ)

ಉತ್ತರಿಸುವ ದಿನಾಂಕ : 22.03.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರದಿಂದ ಈ ಹಿಂದೆ ಬಗರ್ ಹುಕುಂ ಸಾಗುವಳಿ ಯೋಜನೆಯಡಿ ರೈತರಿಗೆ ಮಂಜೂರಾದ ಜಮೀನುಗಳನ್ನು ಹಲವಾರು ವರ್ಷಗಳಿಂದ ರೈತರು ಸಾಗುವಳಿ ಮಾಡಿಕೊಂಡು ಬರುತ್ತಿದ್ದರೂ ಸಹ ಅರಣ್ಯ ಇಲಾಖೆಯವರು ಈ ಸಾಗುವಳಿ ಜಮೀನು ಅರಣ್ಯ ಇಲಾಖೆಗೆ ಸೇರಿದೆ ಎಂದು ರೈತರಿಗೆ ತೊಂದರೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಹಾಗಿದ್ದಲ್ಲಿ, ಸರ್ಕಾರ ಈ ಸಮಸ್ಯೆಯನ್ನು ಪರಿಹರಿಸಲು ತೆಗೆದುಕೊಂಡ ಕ್ರಮಗಳೇನು; | ಸರ್ಕಾರದ ಸುತ್ತೋಲೆ ಸಂ:ಅಪಜೀ 45 ಎಫ್‌ಜಿಎಲ್ 2015, ದಿನಾಂಕ:13.03.2015 ರ ಸುತ್ತೋಲೆಯನ್ವಯ ಅರಣ್ಯ ಸಂರಕ್ಷಣಾ ಕಾಯ್ದೆ 1980 ಜಾರಿಗೆ ಬರುವ ಪೂರ್ವದಲ್ಲಿ ಅಧಿಸೂಚನೆಯಂತೆ ಕಂದಾಯ ದಾಖಲೆಗಳಲ್ಲಿ ಅರಣ್ಯ ಎಂದು ನಮೂದಾಗದ ಪ್ರಯುಕ್ತ ಸಕ್ಷಮ ಪ್ರಾಧಿಕಾರಗಳು ಅರಣ್ಯ ಜಮೀನನ್ನು ಮಂಜೂರು ಮಾಡಿರುವ ಪ್ರಕರಣಗಳಲ್ಲಿ ಅರಣ್ಯ ಸಂರಕ್ಷಣಾ ಕಾಯ್ದೆಯಡಿ ಅರಣ್ಯ ಅಧಿಸೂಚನೆಯಿಂದ ಹೊರತುಪಡಿಸಲು (De-Notification) ಕೇಂದ್ರ ಸರ್ಕಾರದಿಂದ ಅನುಮತಿ ಪಡೆಯಲು ಕ್ರಮ ಕೈಗೊಳ್ಳಬೇಕಾಗಿದ್ದು, ಈ ಪ್ರಕರಣಗಳಲ್ಲಿ ರೈತರನ್ನು ಒಕ್ಕಲೆಬ್ಬಿಸಲು ಅವಕಾಶವಿರುವುದಿಲ್ಲ. |
| ಇ) | ಮಾಗಡಿ ವಿಧಾನಸಭಾ ಕ್ಷೇತ್ರದ ಮಾಗಡಿ ತಾಲ್ಲೂಕು ಕುದೂರು ಹೋಬಳಿ ಬೆಟ್ಟಹಳ್ಳಿ ಗ್ರಾಮದ ಸರ್ವೆ ರೀ.ಸರ್ವೆ ನಂ.89ರಲ್ಲಿ ಬ್ಲಾಕ್ ನಂ. 1 ರಿಂದ 10ರವರೆಗೆ ಸುಮಾರು 10 ಫಲಾನುಭವಿಗಳು ಸರ್ಕಾರದ ದಾಖಲಾತಿಯಂತೆ ಗೋಮಾಳ ಜಮೀನನ್ನು ಹಲವಾರು ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದು, ಈ ಜಮೀನು ಅರಣ್ಯ ಇಲಾಖೆಯ ವ್ಯಾಪ್ತಿಗೆ | ಮಾಗಡಿ ತಾಲ್ಲೂಕು, ಕುದೂರು ಹೋಬಳಿ, ಬೆಟ್ಟಹಳ್ಳಿ ಗ್ರಾಮದ ಸರ್ವೆ ನಂ 89 ರ ಬ್ಲಾಕ್ 01 ರಿಂ 10 ರವರೆಗೆ ಸಾಗುವಳಿ ಮಾಡುತ್ತಿರುವ ಫಲಾನುಭವಿಗಳ ಜಮೀನು ಸರ್ಕಾರದ ಅಧಿಸೂಚನೆ ಸಂ:R-8094-ft-17-05-16; ದಿನಾಂಕ:07.03.1907, ಪ್ರಕಾರ ಅದರಂಗಿ ನಾರ್ಥ್ ಅರಣ್ಯ ಪ್ರದೇಶವಾಗಿರುತ್ತದೆ. ಆದರೆ ಕಂದಾಯ ದಾಖಲೆಗಳಲ್ಲಿ ಅರಣ್ಯವೆಂದು ನಮೂದಿಸದ ಕಾರಣ ಪಹಣಿಯಲ್ಲಿ ಗೋಮಾಳವೆಂದು ನಮೂದಾಗಿರುತ್ತದೆ. |

| | | |
|---|---|---|
| | ಒಳಪಡುವುದರಿಂದ ಯಾವುದೇ ಕೃಷಿ ಚಟುವಟಿಕೆಗಳು ಹಾಗೂ ಸ್ಕೆಚ್ ಮಾಡಬಾರದೆಂದು ತೊಂದರೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಈ) | ಸರ್ಕಾರದಿಂದ ಈ ಹಿಂದೆ ರಾಮನಗರ ಜಿಲ್ಲೆ ಮಾಗಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಸಾಗುವಳಿ ಯೋಜನೆಯಡಿ ರೈತರಿಗೆ ಹಂಚಿಕೆ ಮಾಡಲಾದ ಜಮೀನು ಅರಣ್ಯ ಇಲಾಖೆ ವ್ಯಾಪ್ತಿಗೆ ಒಳಪಡುವುದರಿಂದ ಕೃಷಿ ಚಟುವಟಿಕೆಗಳನ್ನು ರೈತರು ಮಾಡಬಾರದೆಂದು ಆಳವಾದ ಕಾಲುವೆಗಳನ್ನು ನಿರ್ಮಿಸಿ ಕೃಷಿ ಚಟುವಟಿಕೆಗಳಿಗೆ ತೊಂದರೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಸಮಸ್ಯೆಯನ್ನು ಶಾಶ್ವತವಾಗಿ ಬಗೆಹರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಅರಣ್ಯ ಪ್ರದೇಶವನ್ನು ರಕ್ಷಣೆ ಮಾಡುವ ಸಲುವಾಗಿ ಅರಣ್ಯ ಪ್ರದೇಶಗಳ ಗಡಿಗೆ ಜಾನುವಾರು ನಿರೋಧಕ ಕಂದಕಗಳನ್ನು ನಿರ್ಮಿಸಲಾಗಿರುತ್ತದೆ.<br>ಕಂದಾಯ ಇಲಾಖೆ & ಅರಣ್ಯ ಇಲಾಖೆಯಲ್ಲಿ ಪರಸ್ಪರ ಆಗಬೇಕಾಗಿರುವ ವಿಷಯಗಳ ಕುರಿತು ಈಗಾಗಲೇ ಮಾನ್ಯ ಕಂದಾಯ ಸಚಿವರು ಹಾಗೂ ಅರಣ್ಯ, ಪರಿಸರ & ಜೀವಿಶಾಸ್ತ್ರ ಇಲಾಖೆ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:07.01.2015 ರಂದು ನಡೆದ ಸಭೆಯಲ್ಲಿ ಸದರಿ ವಿಷಯದ ಬಗ್ಗೆ ಚರ್ಚಿಸಿ ಕೆಲವು ನಿರ್ಣಯಗಳನ್ನು ಕೈಗೊಳ್ಳಲಾಗಿರುತ್ತದೆ.<br>ಅದರಂತೆ ಸರ್ಕಾರದ ಸುತ್ತೋಲೆ ಸಂ:ಅಪಜೀ 45 ಎಫ್‌ಜಿಎಲ್ 2015, ದಿನಾಂಕ:13.03.2015 ರ ಸುತ್ತೋಲೆಯನ್ವಯ ಅರಣ್ಯ ಸಂರಕ್ಷಣಾ ಕಾಯ್ದೆ 1980 ಜಾರಿಗೆ ಬರುವ ಪೂರ್ವದಲ್ಲಿ ಅಧಿಸೂಚನೆಯಂತೆ ಕಂದಾಯ ದಾಖಲೆಗಳಲ್ಲಿ ಅರಣ್ಯ ಎಂದು ನಮೂದಾಗದ ಪ್ರಯುಕ್ತ ಸಕ್ಷಮ ಪ್ರಾಧಿಕಾರಗಳು ಅರಣ್ಯ ಜಮೀನನ್ನು ಮಂಜೂರು ಮಾಡಿರುವ ಪ್ರಕರಣಗಳಲ್ಲಿ ಅರಣ್ಯ ಸಂರಕ್ಷಣಾ ಕಾಯ್ದೆಯಡಿ ಅರಣ್ಯ ಅಧಿಸೂಚನೆಯಿಂದ ಹೊರತುಪಡಿಸಲು (De-Notification) ಕೇಂದ್ರ ಸರ್ಕಾರದಿಂದ ಅನುಮತಿ ಪಡೆಯಲು ಕ್ರಮ ಕೈಗೊಳ್ಳಬೇಕಾಗಿದ್ದು, ಈ ಪ್ರಕರಣಗಳಲ್ಲಿ ರೈತರನ್ನು ಒಕ್ಕಲೆಬ್ಬಿಸಲು ಅವಕಾಶವಿರುವುದಿಲ್ಲ. |
| ಉ) | ಅರಣ್ಯ ಹಾಗೂ ಕಂದಾಯ ಇಲಾಖೆಯು ಜಂಟಿ ಸರ್ವೆಯನ್ನು ನಡೆಸಿ ದಾಖಲಾತಿಯಂತೆ ಜಮೀನನ್ನು ರೈತರಿಗೆ ಹಂಚಿಕೆ ಮಾಡಲು ಇರುವ ತೊಂದರೆಗಳೇನು? | |

**ಸಂಖ್ಯೆ: ಆರ್‌ಡಿ 69 ಎಲ್‌ಜಿಕ್ಯೂ 2021**

**(ಆರ್ .ಅಶೋಕ)**
**ಕಂದಾಯ ಸಚಿವರು.**

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3210 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕರುಣಾಕರ ರೆಡ್ಡಿ ಜಿ (ಹರಪನಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2020-21ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳಿಗೆ ನೀಡುವ ಗಂಗಾ ಕಲ್ಯಾಣ, ನೇರ ಸಾಲ, ಸ್ವಯಂ ಉದ್ಯೋಗ, ಇತ್ಯಾದಿ ಯೋಜನೆಗಳನ್ನು ನಿಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | **ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ**<br>ಬಂದಿದೆ<br>2020-21ನೇ ಸಾಲಿನಲ್ಲಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಹಿಂದುಳಿದ ವರ್ಗಗಳಿಗೆ ನೀಡುವ ಗಂಗಾ ಕಲ್ಯಾಣ, ನೇರ ಸಾಲ, ಸ್ವಯಂ ಉದ್ಯೋಗ ಸಾಲ ಯೋಜನೆಗಳ ಅನುಷ್ಠಾನಕ್ಕೆ ಅನುದಾನ ಲಭ್ಯವಾಗದ ಕಾರಣ ಯೋಜನೆಗಳನ್ನು ನಿಲ್ಲಿಸಲಾಗಿದೆ.<br>**ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ**<br>ವಿಶ್ವಕರ್ಮ ಸಮುದಾಯದವರಿಗೆ ನಿಗಮವು ಈ ಕೆಳಕಂಡ 07 ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ<br>1. ಪಂಚವೃತ್ತಿ ಅಭಿವೃದ್ಧಿಗಾಗಿ ಆರ್ಥಿಕ ನೆರವು.<br>2. ಸ್ವಯಂ ಉದ್ಯೋಗ ನೇರಸಾಲ ಯೋಜನೆ.<br>3. ಬ್ಯಾಂಕ್‌ಗಳ ಸಹಯೋಗದೊಂದಿಗೆ ಸ್ವಯಂ ಉದ್ಯೋಗ ಸಾಲ.<br>4. ಅರಿವು-ಶೈಕ್ಷಣಿಕ ಸಾಲ ಯೋಜನೆ.<br>5. ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಯೋಜನೆ.<br>6. ಮಹಿಳೆಯರಿಗೆ ಮೈಕ್ರೋ ಕ್ರೆಡಿಟ್ ಸಾಲ ಯೋಜನೆ.<br>7. ಸಾಂಪ್ರದಾಯಿಕ ವೃತ್ತಿಸಾಲ ಯೋಜನೆ (ಕಮ್ಮಾರಿಕೆ, ಅಕ್ಕಸಾಲಿ ಮತ್ತು ಬಡಗಿ ಉದ್ಯಮಿಗಳಿಗೆ ಸಾಲ)<br>**ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತ**<br>ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ 2020-21ನೇ ಸಾಲಿನಲ್ಲಿ ಬ್ಯಾಂಕ್‌ಗಳ ಸಹಯೋಗದೊಂದಿಗೆ ಸ್ವಯಂ ಉದ್ಯೋಗ ಸಾಲ ಯೋಜನೆ (ಚೈತನ್ಯ ಸಬ್ಸಿಡಿ-ಕಂ-ಸಾಫ್ಟ್ ಲೋನ್ ಯೋಜನೆ), ಸ್ವಯಂ ಉದ್ಯೋಗ ಸಾಲ ಯೋಜನೆ, ಕಿರುಸಾಲ/ಸ್ವಸಹಾಯ ಗುಂಪುಗಳಿಗೆ ಸಹಾಯ ಧನ, ಗಂಗಾ ಕಲ್ಯಾಣ ಯೋಜನೆ, ಅರಿವು ಶೈಕ್ಷಣಿಕ ಯೋಜನೆ ಮತ್ತು ಕೌಶಲ್ಯಾಭಿವೃದ್ಧಿ/ಉದ್ಯಮಶೀಲತಾ ತರಬೇತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ<br>**ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ ನಿಯಮಿತ**<br>ಉದ್ಭವಿಸುವುದಿಲ್ಲ<br>**ಕರ್ನಾಟಕ ಆರ್ಯ ವೈಶ್ಯ ಸಮುದಾಯ ಅಭಿವೃದ್ಧಿ ನಿಗಮ ನಿಯಮಿತ**<br>ಉದ್ಭವಿಸುವುದಿಲ್ಲ |

| | | |
|---|---|---|
| ಆ) | ಬಂದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಇದನ್ನು ಸರಿಪಡಿಸಲಾಗುವುದು | ಉದ್ಭವಿಸುವುದಿಲ್ಲ. |
| ಇ) | ಈ ಯೋಜನೆಗಳು ಹಿಂದುಳಿದ ವರ್ಗಗಳಿಗೆ ತಕ್ಷಣ ಲಭ್ಯವಾಗಲು ಸರ್ಕಾರ ಯಾವ ರೀತಿಯ ತುರ್ತು ಕ್ರಮ ಜರುಗಿಸುವುದು (ಸಂಪೂರ್ಣ ವಿವರ ನೀಡುವುದು) | ಈ ಯೋಜನೆಗಳನ್ನು ನಿಗಧಿತ ಸಮಯದಲ್ಲಿ ಅರ್ಜಿ ಪಡೆದು ಫಲಾನುಭವಿಗಳನ್ನು ಆಯ್ಕೆ ಮಾಡಿ ಸೌಲಭ್ಯಗಳನ್ನು ತ್ವರಿತವಾಗಿ ಅರ್ಜಿದಾರರಿಗೆ ತಲುಪಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ:ಹಿಂವಕ 226 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3241 |
| ಮಾನ್ಯ ಸದಸ್ಯರ ಹೆಸರು | ಶ್ರೀ ದೊಡ್ಡನಗೌಡ ಮಹಾಂತೇಶ್ ಬಸವಂತರಾಯ |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೇವರಾಜ ಅರಸು ನಿಗಮದಿಂದ ಹಿಂದುಳಿದ ವರ್ಗಗಳ ಬಡ ಜನರಿಗೆ ನೀಡುತ್ತಿದ್ದ ಸರ್ಕಾರದ ವಿವಿಧ ಯೋಜನೆಗಳನ್ನು 2020-21ನೇ ಸಾಲಿನಲ್ಲಿ ತಡೆಹಿಡಿದಿರಲು ಕಾರಣವೇನು; | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ 2020-21ನೇ ಸಾಲಿನ ಆಯವ್ಯಯದಲ್ಲಿ ರೂ.80.00ಕೋಟಿಗಳ ಅನುದಾನ ಒದಗಿಸಲಾಗಿದೆ. ಈ ಮೊತ್ತದಲ್ಲಿ ಅರಿವು-ಶೈಕ್ಷಣಿಕ ಸಾಲ ಯೋಜನೆಯ ಸೌಲಭ್ಯ ಪಡೆದ ನವೀಕರಣ ವಿದ್ಯಾರ್ಥಿಗಳಿಗೆ ಮುಂದುವರೆದ ಕಂತಿನ ಮೊತ್ತ ಪಾವತಿಸಲು ರೂ.17.50 ಕೋಟಿಗಳನ್ನು ಹಂಚಿಕೆ ಮಾಡಿಕೊಳ್ಳಲಾಗಿದೆ.<br><br>2019-20ನೇ ಸಾಲಿಗೆ ಗಂಗಾ ಕಲ್ಯಾಣ ನೀರಾವರಿ ಯೋಜನೆಗೆ ರೂ.95.00 ಕೋಟಿಗಳನ್ನು ಹಂಚಿಕೆ ಮಾಡಿಕೊಳ್ಳಲಾಗಿದ್ದು, ರೂ.60.00 ಕೋಟಿಗಳ ಅನುದಾನವನ್ನು ಕಡಿತಗೊಳಿಸಿದ್ದರಿಂದ 2020-21ನೇ ಸಾಲಿನಲ್ಲಿ ಒದಗಿಸಲಾದ ಅನುದಾನದಲ್ಲಿ ರೂ.60.00 ಕೋಟಿಗಳನ್ನು 2019-20ನೇ ಸಾಲಿನ ಗಂಗಾ ಕಲ್ಯಾಣ ಯೋಜನೆಗೆ ಬಳಸಿಕೊಳ್ಳಲಾಗಿದೆ. ಹಾಗೂ ರೂ.2.50 ಕೋಟಿಗಳನ್ನು ಆಯವ್ಯಯ ಭಾಷಣದಲ್ಲಿ ಘೋಷಿಸಿರುವ ಕಾರ್ಯಕ್ರಮಕ್ಕಾಗಿ ರೂ.2.50 ಕೋಟಿಗಳನ್ನು ಹಂಚಿಕೆ ಮಾಡಿಕೊಂಡು ಅನುಷ್ಠಾನಗೊಳಿಸಲಾಗಿದೆ.<br><br>2020-21ನೇ ಸಾಲಿಗೆ ಕೋವಿಡ್ -19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಕ್ಲಿಷ್ಟಕರ ಆರ್ಥಿಕ ಪರಿಸ್ಥಿತಿಯಲ್ಲಿ ಈ ಕೆಳಕಂಡ ಯೋಜನೆಗಳ ಅನುಷ್ಠಾನಕ್ಕೆ ಅನುದಾನ ಲಭ್ಯವಾಗದ ಕಾರಣ ತಡೆಹಿಡಿಯಲಾಗಿದೆ.<br>1. ಸ್ವಯಂ ಉದ್ಯೋಗ ಸಾಲ ಯೋಜನೆ.<br>2. ಗಂಗಾ ಕಲ್ಯಾಣ ನೀರಾವರಿ ಯೋಜನೆ.<br>3. ಸಾಂಪ್ರದಾಯಿಕ ವೃತ್ತಿದಾರರ ಸಾಲ ಯೋಜನೆ.<br>4. ಅರಿವು-ಶೈಕ್ಷಣಿಕ ಸಾಲ ಯೋಜನೆ (ಹೊಸದಾಗಿ)<br>5. ಕಿರು ಸಾಲ ಯೋಜನೆ. |
| ಆ) | 2020-21ನೇ ಸಾಲಿನಲ್ಲಿ ಬೇರೆ ಬೇರೆ ನಿಗಮಗಳಲ್ಲಿ ಈ ಯೋಜನೆಗಳಿಗೆ ಫಲಾನುಭವಿಗಳನ್ನು ಆಯ್ಕೆ ಮಾಡಲು ಶಾಸಕರಿಗೆ ಗುರಿ ನಿಗದಿಪಡಿಸಿ ಫಲಾನುಭವಿಗಳ ಆಯ್ಕೆ ಪಟ್ಟಿ ಕೇಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಇ) | ಬಂದಿದ್ದಲ್ಲಿ, ದೇವರಾಜ ಅರಸು ನಿಗಮದಿಂದ 2021-22ನೇ ಸಾಲಿನಲ್ಲಿ ಶಾಸಕರಿಗೆ ಹೆಚ್ಚಿನ ಗುರಿ ನಿಗದಿ ಪಡಿಸಲು ಸರ್ಕಾರದ ಕ್ರಮವೇನು? | ಉದ್ಭವಿಸುವುದಿಲ್ಲ. |

ಸಂಖ್ಯೆ:ಹಿಂವಕ 219 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ (ಮಡಿಕೇರಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3245** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಮೂರು ವರ್ಷಗಳಿಂದ ಕೊಡುಗು ಜಿಲ್ಲೆಗೆ ವಿವಿಧ ಯೋಜನೆ ಅಡಿಯಲ್ಲಿ ಎಷ್ಟು ಮನೆಗಳನ್ನು ಮಂಜೂರು ಮಾಡಲಾಗಿದೆ ? (ಕ್ಷೇತ್ರವಾರು ವಿವರ ನೀಡುವುದು) | ಕೊಡಗು ಜಿಲ್ಲೆಗೆ ಕಳೆದ ಮೂರು ವರ್ಷಗಳಿಂದ ಅಂದರೆ 2017-18 ರಿಂದ ವಿವಿಧ ವಸತಿ ಯೋಜನೆಯಡಿ ಒಟ್ಟು **3658** ಮನೆಗಳನ್ನು ಮಂಜೂರು ಮಾಡಲಾಗಿದ್ದು, ಯೋಜನಾವಾರು ವಿವರ ಕೆಳಕಂಡಂತಿದೆ. |

| ಯೋಜನೆ | ಮಂಜೂರು ಮಾಡಲಾದ ಮನೆಗಳು | | | | |
|---|---|---|---|---|---|
| | 2017-18 | 2018-19 | 2019-20 | 2020-21 | ಒಟ್ಟು |
| ಬಸವ ವಸತಿ ಯೋಜನೆ | 2935 | 6 | 0 | 0 | 2941 |
| ಡಾ|| ಬಿ.ಆರ್ ಅಂಬೇಡ್ಕರ್ ನಿವಾಸ್ | 450 | 0 | 0 | 0 | 450 |
| ದೇವರಾಜ ಅರಸು ವಸತಿ ಯೋಜನೆ | 31 | 0 | 0 | 0 | 31 |
| ವಾಜಪೇಯಿ ವಸತಿ ಯೋಜನೆ | 110 | 0 | 0 | 0 | 110 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) | 0 | 0 | 2 | 0 | 2 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನ) | 0 | 0 | 124 | 0 | 124 |
| **ಒಟ್ಟು** | **3526** | **6** | **126** | **0** | **3658** |

ಕ್ಷೇತ್ರವಾರು ವಿವರವನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ.

ಸಂಖ್ಯೆ :ವಇ 153 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

LAQ-3245 Annexure-1

ಕೊಡಗು ಜಿಲ್ಲೆಗೆ ಕಳೆದ ಮೂರು ವರ್ಷಗಳಿಂದ ವಿವಿಧ ವಸತಿ ಯೋಜನೆಯಡಿ ಮಂಜೂರಾದ ಮನೆಗಳ ವಿಧಾನಸಭಾ

| Area | District | Constituency | Scheme | Year | Ben. Selection |
|---|---|---|---|---|---|
| Rural | Kodagu | Madikeri | Basava Housing Scheme | 2017-2018 | 1335 |
| Rural | Kodagu | Madikeri | Basava Housing Scheme_Additional | 2017-2018 | 131 |
| Rural | Kodagu | Madikeri | Devraj Urs Housing Scheme-Rural | 2017-2018 | 21 |
| Rural | Kodagu | Madikeri | Dr.B R Ambedkar Nivas Yojane-Rural (ST Dept) | 2017-2018 | 228 |
| Rural | Kodagu | Madikeri | Dr.B.R Ambedkar Nivas Yojana Rural | 2017-2018 | 116 |
| Urban | Kodagu | Madikeri | Dr.B.R Ambedkar Nivas Yojana Urban | 2017-2018 | 30 |
| Urban | Kodagu | Madikeri | Vajpayee Urban Housing Scheme_Regular | 2017-2018 | 90 |
| Urban | Kodagu | Madikeri | PMAY(U)* | 2019-2020 | 88 |
| | | **Madikeri Total** | | | **2039** |
| Rural | Kodagu | Virajpet | Basava Housing Scheme | 2017-2018 | 1290 |
| Rural | Kodagu | Virajpet | Basava Housing Scheme | 2018-2019 | 6 |
| Rural | Kodagu | Virajpet | Basava Housing Scheme_Additional | 2017-2018 | 179 |
| Rural | Kodagu | Virajpet | Devraj Urs Housing Scheme-Rural | 2017-2018 | 10 |
| Rural | Kodagu | Virajpet | Dr.B.R Ambedkar Nivas Yojana Rural | 2017-2018 | 76 |
| Rural | Kodagu | Virajpet | PMAY(G) | 2019-2020 | 2 |
| Urban | Kodagu | Virajpet | Vajpayee Urban Housing Scheme_Regular | 2017-2018 | 20 |
| Urban | Kodagu | Virajpet | PMAY(U)* | 2019-2020 | 36 |
| | | **Virajpet Total** | | | **1619** |
| | | **Grand Total** | | | **3658** |

*PMAY(U) ಯೋಜನೆಯಡಿ BLC ಘಟಕದಡಿ ಕೇಂದ್ರ ಸರ್ಕಾರದ ಅನುದಾನ ರೂ.1.50ಲಕ್ಷಗಳನ್ನು ಮಾತ್ರ ನೀಡಲಾಗುತ್ತಿದೆ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3246 |
| ಸದಸ್ಯರ ಹೆಸರು | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ |
| ಉತ್ತರಿಸುವ ದಿನಾಂಕ: | 22-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಯಾವ ಯಾವ ದೇವಸ್ಥಾನಗಳ ಅಭಿವೃದ್ಧಿಗೆ ಎಷ್ಟೆಷ್ಟು ಅನುದಾನ ಬಿಡುಗಡೆಗೊಳಿಸಲಾಗಿದೆ? (ಕ್ಷೇತ್ರವಾರು ವಿವರ ನೀಡುವುದು) | ರಾಜ್ಯದಲ್ಲಿನ ದೇವಸ್ಥಾನಗಳು/ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿಗೆ ಮುಜರಾಯಿ ಇಲಾಖೆಯಡಿ ಈ ಕೆಳಕಂಡ ಯೋಜನೆಗಳ ಅಡಿ 2020-21ನೇ ಸಾಲಿನಲ್ಲಿ (ಫೆಬ್ರವರಿ ಅಂತ್ಯಕ್ಕೆ) ಒಟ್ಟು ರೂ.12125.38ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ, |

ಮೊತ್ತ ರೂ.ಲಕ್ಷಗಳಲ್ಲಿ

| ಯೋಜನೆ ವಿವರ | 2020-21 (ಫೆಬ್ರವರಿ ಅಂತ್ಯಕ್ಕೆ) |
|---|---|
| ದುರಸ್ಥಿ ಜೀರ್ಣೋದ್ಧಾರ/ ಅಭಿವೃದ್ಧಿ | 10026.50 |
| ಆರಾಧನಾ ಯೋಜನೆ | 739.20 |
| ಪರಿಶಿಷ್ಟಜಾತಿ ಉಪಯೋಜನೆ | 1182.72 |
| ಗಿರಿಜನ ಉಪಯೋಜನೆ | 176.96 |
| ಒಟ್ಟು | 12125.38 |

- ದುರಸ್ಥಿ ಜೀರ್ಣೋದ್ಧಾರ/ ಅಭಿವೃದ್ಧಿ ಯೋಜನೆಯಡಿ ಸರ್ಕಾರದ ಹಂತದಲ್ಲಿ ಸ್ವೀಕೃತವಾಗುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ದೇವಾಲಯಗಳನ್ನು ಗುರುತಿಸಿ ಜಿಲ್ಲಾವಾರು ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಜಿಲ್ಲಾವಾರು ವಿವರವನ್ನು ಅನುಬಂಧದಲ್ಲಿ ಒದಗಿಸಿದೆ.
- ಆರಾಧನಾ ಯೋಜನೆ/ಪರಿಶಿಷ್ಟಜಾತಿ ಉಪಯೋಜನೆ/ ಗಿರಿಜನ ಉಪಯೋಜನೆಯಡಿ ವಿಧಾನ ಸಭಾ ಕ್ಷೇತ್ರವಾರು ಅನುದಾನ ಬಿಡುಗಡೆ ಮಾಡುತ್ತಿದ್ದು, ಪ್ರತಿ ವಿಧಾನ ಸಭಾ ಕ್ಷೇತ್ರಕ್ಕೆ ಬಿಡುಗಡೆ ಮಾಡಿದ ಅನುದಾನದ ವಿವರ ಈ ಕೆಳಕಂಡಂತಿದೆ.

ರೂ.ಲಕ್ಷಗಳಲ್ಲಿ

| ರಾಜ್ಯದ ಪ್ರತಿ ವಿಧಾನ ಸಭಾ ಕ್ಷೇತ್ರಕ್ಕೆ 2020-21ನೇ ಸಾಲಿನಲ್ಲಿ ಈ ಕೆಳಕಂಡಂತೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. | | |
|---|---|---|
| ಆರಾಧನಾ ಯೋಜನೆ | ಪರಿಶಿಷ್ಟಜಾತಿ ಉಪಯೋಜನೆ | ಗಿರಿಜನ ಉಪಯೋಜನೆ |
| 3.30 | 5.28 | 0.79 |

ಸರ್ಕಾರದಿಂದ ಈ ಮೇಲಿನ ಯೋಜನೆಯಡಿ ಮಂಜೂರಾದ ಅನುದಾನವನ್ನು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ. ಮೇಲಿನ ಯೋಜನೆಗಳಡಿ ಹೊರಡಿಸಿರುವ ಸರ್ಕಾರದ ಮಾರ್ಗಸೂಚಿಗಳ ರೀತ್ಯಾ ರಚಿಸಿರುವ ಆಯಾಯ ಜಿಲ್ಲಾ/ಆರಾಧನಾ ಸಮಿತಿಯು ಆಯ್ಕೆ ಮಾಡಿದ ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿಗೆ ಅನುದಾನ ಬಿಡುಗಡೆ ಮಾಡಲು ಜಿಲ್ಲಾಧಿಕಾರಿಗಳು ಕ್ರಮವಹಿಸುತ್ತಾರೆ.

(ಸಂಖ್ಯೆಕಂಇ 80 ಮುಸಪ್ರ 2021)

(ಕೋಟ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

ಅನುಬಂಧ

2020-21ನೇ ವಿತ್ತ ವರ್ಷದಲ್ಲಿ ರಾಜ್ಯದ ಧಾರ್ಮಿಕ ಸಂಸ್ಥೆಗಳ ದುರಸ್ಥಿ/ ಜೀರ್ಣೋದ್ಧಾರ/ನಿರ್ಮಾಣಕ್ಕಾಗಿ ಮತ್ತು ವಸತಿ ಸೌಕರ್ಯ ಮತ್ತು ಮೂಲಭೂತ ಸೌಕರ್ಯಕ್ಕಾಗಿ ಸರ್ಕಾರದಿಂದ ಬಿಡುಗಡೆಯಾದ ಅನುದಾನದ ಜಿಲ್ಲಾವಾರು ವಿವರ.(ಅಪ್ ಲೋಡ್ 28.02.2021)

| ಕ್ರ ಸಂ | ಜಿಲ್ಲೆ | ಸಂಸ್ಥೆ | ಬಿಡುಗಡೆ ಮೊತ್ತ ರೂ.ಲಕ್ಷಗಳಲ್ಲಿ |
|---|---|---|---|
| 1 | ಬೆಂಗಳೂರು ನಗರ | 10 | 248.00 |
| 2 | ಬೆಂಗಳೂರು ಗ್ರಾಮಾಂತರ | 5 | 33.00 |
| 3 | ಬಳ್ಳಾರಿ | 5 | 137.50 |
| 4 | ಬಾಗಲಕೋಟೆ | 38 | 456.50 |
| 5 | ಬೆಳಗಾವಿ | 53 | 454.00 |
| 6 | ವಿಜಯಪುರ | 42 | 266.50 |
| 7 | ಬೀದರ್ | 6 | 40.50 |
| 8 | ಚಾಮರಾಜನಗರ | 12 | 164.50 |
| 9 | ಚಿಕ್ಕಬಳ್ಳಾಪುರ | 2 | 9.50 |
| 10 | ಚಿಕ್ಕಮಗಳೂರು | 27 | 725.50 |
| 11 | ಚಿತ್ರದುರ್ಗ | 45 | 566.00 |
| 12 | ದಕ್ಷಿಣ ಕನ್ನಡ | 55 | 708.00 |
| 13 | ಧಾರವಾಡ | 24 | 194.50 |
| 14 | ದಾವಣಗೆರೆ | 19 | 307.50 |
| 15 | ಗದಗ | 8 | 115.00 |
| 16 | ಹಾಸನ | 20 | 226.00 |
| 17 | ಹಾವೇರಿ | 26 | 352.00 |
| 18 | ಕಲಬುರಗಿ | 19 | 228.00 |
| 19 | ಕೊಡಗು | 8 | 69.00 |
| 20 | ಕೋಲಾರ | 2 | 8.00 |
| 21 | ಕೊಪ್ಪಳ | 2 | 37.50 |
| 22 | ಮಂಡ್ಯ | 5 | 115.00 |
| 23 | ಮೈಸೂರು | 57 | 489.50 |
| 24 | ರಾಮನಗರ | 7 | 140.00 |
| 25 | ರಾಯಚೂರು | 7 | 210.00 |
| 26 | ಶಿವಮೊಗ್ಗ | 37 | 542.00 |
| 27 | ತುಮಕೂರು | 141 | 910.00 |
| 28 | ಉಡುಪಿ | 154 | 1858.50 |
| 29 | ಉತ್ತರ ಕನ್ನಡ | 31 | 365.00 |
| 30 | ಯಾದಗಿರಿ | 8 | 49.50 |
| | ಒಟ್ಟು | 875 | 10026.50 |

M.L. Varalakshmi
ಎಂ. ಎಲ್. ವರಲಕ್ಷ್ಮಿ,
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3251 |
| ಉತ್ತರಿಸುವ ದಿನಾಂಕ | 22-03-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಲವು ಉಪನೋಂದಣಾಧಿಕಾರಿಯವರ ಕಛೇರಿಯಲ್ಲಿ ವಿದ್ಯುತ್ ಸಮಸ್ಯೆ ಉಂಟಾದಾಗ ಜನರೇಟರ್ ವ್ಯವಸ್ಥೆ ಇಲ್ಲದೆ ಸಾರ್ವಜನಿಕರಿಗೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ. | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಎಲ್ಲಾ ಉಪ ನೋಂದಣಿ ಕಛೇರಿ ಹಾಗೂ ಜಿಲ್ಲಾ ನೋಂದಣಿ ಕಛೇರಿಗಳಿಗೆ ಯು.ಪಿ.ಎಸ್ ಹಾಗೂ ಜನರೇಟರ್ ವ್ಯವಸ್ಥೆಯನ್ನು 2014ನೇ ಸಾಲಿನಲ್ಲಿ ಅಳವಡಿಸಲಾಗಿದ್ದು, ಬಹಳಷ್ಟು ಕಛೇರಿಗಳಲ್ಲಿ ಇವುಗಳ ಬ್ಯಾಟರಿಗಳು ಹಾಳಾಗಿರುವುದರಿಂದ, ಸದರಿ ಯು.ಪಿ.ಎಸ್‌ಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿರುವುದಿಲ್ಲ. ಆದುದರಿಂದ ಎಲ್ಲಾ ಜಿಲ್ಲಾ/ ಉಪ ಕಛೇರಿಗಳಲ್ಲಿ ಹಾಲಿ ಇರುವ ಯು.ಪಿ.ಎಸ್ ಹಾಗೂ ಬ್ಯಾಟರಿಗಳನ್ನು ಬದಲಾಯಿಸಲು ಇಲಾಖೆಯಿಂದ ದಿನಾಂಕ:04-03-2021ರಂದು ಇ-ಪ್ರೋಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಟೆಂಡರ್ ಪ್ರಕಟಿಸಲಾಗಿರುತ್ತದೆ. ಸದರಿ ಟೆಂಡರ್ ಪ್ರಕ್ರಿಯೆಯನ್ನು ಶೀಘ್ರವಾಗಿ ಪೂರ್ಣಗೊಳಿಸಿ, ಹೊಸ ಯು.ಪಿ.ಎಸ್ ಹಾಗೂ ಬ್ಯಾಟರಿಗಳನ್ನು ಅಳವಡಿಸಲಾಗುವುದು. ಹಾಗೂ ಯಾವುದಾದರೂ ಕಛೇರಿಯಲ್ಲಿ ಜನರೇಟರ್‌ಗಳು ಕಾರ್ಯ ನಿರ್ವಹಿಸದೇ ಇದ್ದಲ್ಲಿ ಅವುಗಳನ್ನು ಶೀಘ್ರವಾಗಿ ದುರಸ್ತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ರಾಜ್ಯದಲ್ಲಿ ಸರ್ವರ್ ಸಮಸ್ಯೆಯಿಂದ ನೋಂದಣಿ ನಿಧಾನಗತಿಯಲ್ಲಿ ಆಗಿದ್ದು ಈ ಸಮಸ್ಯೆ ಬಗೆಹರಿಸಲು ಸರ್ಕಾರ ಯಾವ ಕ್ರಮಕೈಗೊಂಡಿದೆ. | 1) ರಾಜ್ಯದಲ್ಲಿ ವ್ಯವಹಾರ ಸರಳೀಕರಣಗೊಳಿಸುವ (EODB) ನಿಟ್ಟಿನಲ್ಲಿ ದಸ್ತಾವೇಜು ನೋಂದಾಯಿಸುವಾಗ ಸರಿಯಾದ ಪಕ್ಷಕಾರರನ್ನು ಗುರುತಿಸಲು ಹಾಗೂ ಮೋಸದ ನೋಂದಣಿ ಮತ್ತು impersonation ಆಗುವುದನ್ನು ತಡೆಯಲು ಮೊಬೈಲ್ ನಂಬರ್ ಮೂಲಕ ಓ.ಟಿ.ಪಿ (One Time Password) ಪಡೆದು ಅದನ್ನು ಪ್ರಮಾಣೀಕರಿಸುವ ಉದ್ದೇಶಕ್ಕಾಗಿ ದಿನಾಂಕ:11-09-2019 ರಿಂದ ಓ.ಟಿ.ಪಿ ವ್ಯವಸ್ಥೆ ಜಾರಿಗೊಳಿಸಲಾಗಿರುತ್ತದೆ. ಈ ರೀತಿಯಾಗಿ ಜಾರಿಗೆ ತಂದಿರುವ ಓ.ಟಿ.ಪಿ ವ್ಯವಸ್ಥೆಯಿಂದ ಕೆಲವೊಮ್ಮೆ ಸಮಸ್ಯೆ ಉಂಟಾಗಿ ಜನರು ನೋಂದಣಿಗಾಗಿ ಕಾಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಉದಾಹರಣೆಗೆ ದಿನಾಂಕ: 08-03-2021 ರಂದು ಹಾಗೂ ದಿನಾಂಕ: 09-03-2021 ರಂದು ಓ.ಟಿ.ಪಿ ಸಮಸ್ಯೆ ಉಂಟಾಗಿದ್ದು, ಇದು ಕಾವೇರಿ ತಂತ್ರಾಂಶದ ಸಮಸ್ಯೆ ಆಗಿರುವುದಿಲ್ಲ. ಇದು e-Governance ಇಲಾಖೆಯ ಅಡಿ ಬರುವ Directorate of Electronic Delivery |

. . . 2

| | | |
|---|---|---|
| | | of Citizen Services (EDCS) ರವರ SMS ಸೇವೆಯಲ್ಲಿನ ಸಮಸ್ಯೆಯಾಗಿರುತ್ತದೆ.<br><br>2) ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ದಸ್ತಾವೇಜುಗಳ ನೋಂದಣಿಯನ್ನು ಕಾವೇರಿ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. ದಸ್ತಾವೇಜುಗಳ ನೋಂದಣಿ ಸಮಯದಲ್ಲಿ ಸ್ಥಿರಾಸ್ತಿ ಮತ್ತು ಮಾರಾಟಗಾರರ ವಿವರಗಳನ್ನು ಕೆಳಕಂಡಂತೆ ಸಂಬಂಧಪಟ್ಟ ಆಸ್ತಿಯ ತಂತ್ರಾಂಶದಿಂದ ಆನ್‌ಲೈನ್ ಮೂಲಕ ಪಡೆದು, ಪ್ರಮಾಣೀಕರಿಸಿಕೊಂಡು ದಸ್ತಾವೇಜುಗಳನ್ನು ನೋಂದಾಯಿಸಲಾಗುತ್ತದೆ.<br><br>• ಗ್ರಾಮ ಪಂಚಾಯತ್ ವ್ಯಾಪ್ತಿಯ ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ವಿವರಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ನಿರ್ವಹಿಸುತ್ತಿರುವ "ಇ-ಸ್ವತ್ತು" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>• ಕೃಷಿ ಜಮೀನುಗಳಿಗೆ ಸಂಬಂಧಿಸಿದ ವಿವರಗಳನ್ನು ಭೂಮಿ ಮಾನಿಟರಿಂಗ್ ಸೆಲ್ ನಿರ್ವಹಿಸುತ್ತಿರುವ "ಭೂಮಿ" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>• ನಗರ ಪ್ರದೇಶಗಳ ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ವಿವರಗಳನ್ನು ನಗರಾಭಿವೃದ್ಧಿ ಇಲಾಖೆ ನಿರ್ವಹಿಸುತ್ತಿರುವ "ಇ-ಆಸ್ತಿ" ತಂತ್ರಾಂಶದಿಂದ ಪಡೆಯಲಾಗುತ್ತದೆ.<br><br>ದಸ್ತಾವೇಜುಗಳ ನೋಂದಣಿ ಸಮಯದಲ್ಲಿ ಮೇಲ್ಕಂಡ ತಂತ್ರಾಂಶಗಳಿಂದ ಸ್ಥಿರಾಸ್ತಿಗಳ ವಿವರಗಳನ್ನು ಆನ್‌ಲೈನ್ ಮೂಲಕ ಪಡೆಯಲು ಸಾಧ್ಯವಾಗದೇ ಇರುವ ಸಂದರ್ಭಗಳಲ್ಲಿ, ಇಂತಹ ದಸ್ತಾವೇಜುಗಳ ನೋಂದಣಿಯಲ್ಲಿ ಅಡಚಣೆ ಉಂಟಾಗುತ್ತದೆ. ಈ ರೀತಿ ಉಂಟಾದ ಅಡಚಣೆಗಳನ್ನು ಸಂಬಂಧಿಸಿದ ತಂತ್ರಾಂಶ ನಿರ್ವಹಿಸುತ್ತಿರುವ ತಾಂತ್ರಿಕ ಸದಸ್ಯರ ಗಮನಕ್ಕೆ ತರಲಾಗುತ್ತದೆ. ಅವರಿಂದ ತಾಂತ್ರಿಕ ಸಮಸ್ಯೆಗಳನ್ನು ಪರಿಹರಿಸಿಕೊಂಡ ಕೂಡಲೇ ಆನ್‌ಲೈನ್ ಮೂಲಕ ಸಂಬಂಧಿಸಿದ ತಂತ್ರಾಂಶದಿಂದ ಸ್ಥಿರಾಸ್ತಿಗಳ ವಿವರಗಳನ್ನು ಪಡೆದುಕೊಂಡು ದಸ್ತಾವೇಜುಗಳ ನೋಂದಣಿಯನ್ನು ಪೂರ್ಣಗೊಳಿಸಲಾಗುತ್ತಿದೆ. |

ಸಂಖ್ಯೆ: ಕಂಇ/140/ಎಂಎನ್‌ಎಸ್ಐ/2021

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3252 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಮದಿಂದ 2020-21 ನೇ ಸಾಲಿಗೆ ಗಂಗಾ ಕಲ್ಯಾಣ ಯೋಜನೆ ಮತ್ತು ವಿವಿಧ ಯೋಜನೆಗಳಡಿ ಸಾಲ ಸೌಲಭ್ಯಕ್ಕೆ ಅರ್ಜಿಗಳನ್ನು ಆಹ್ವಾನಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | **ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ**<br>ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ 2020-21ನೇ ಸಾಲಿನ ಆಯವ್ಯಯದಲ್ಲಿ ರೂ.80.00ಕೋಟಿಗಳ ಅನುದಾನ ಒದಗಿಸಲಾಗಿದೆ. ಈ ಮೊತ್ತದಲ್ಲಿ ಅರಿವು-ಶೈಕ್ಷಣಿಕ ಸಾಲ ಯೋಜನೆಯ ಸೌಲಭ್ಯ ಪಡೆದ ನವೀಕರಣ ವಿದ್ಯಾರ್ಥಿಗಳಿಗೆ ಮುಂದುವರೆದ ಕಂತಿನ ಮೊತ್ತ ಪಾವತಿಸಲು ರೂ.17.50 ಕೋಟಿಗಳನ್ನು ಹಂಚಿಕೆ ಮಾಡಿಕೊಳ್ಳಲಾಗಿದೆ.<br>2019-20ನೇ ಸಾಲಿಗೆ ಗಂಗಾ ಕಲ್ಯಾಣ ನೀರಾವರಿ ಯೋಜನೆಗೆ ರೂ.95.00 ಕೋಟಿಗಳನ್ನು ಹಂಚಿಕೆ ಮಾಡಿಕೊಳ್ಳಲಾಗಿದ್ದು, ರೂ.60.00 ಕೋಟಿಗಳ ಅನುದಾನವನ್ನು ಕಡಿತಗೊಳಿಸಿದ್ದರಿಂದ 2020-21ನೇ ಸಾಲಿನಲ್ಲಿ ಒದಗಿಸಲಾದ ಅನುದಾನದಲ್ಲಿ ರೂ.60.00 ಕೋಟಿಗಳನ್ನು 2019-20ನೇ ಸಾಲಿನ ಗಂಗಾ ಕಲ್ಯಾಣ ಯೋಜನೆಗೆ ಬಳಸಿಕೊಳ್ಳಲಾಗಿದೆ. ಹಾಗೂ ರೂ.2.50 ಕೋಟಿಗಳನ್ನು ಆಯವ್ಯಯ ಭಾಷಣದಲ್ಲಿ ಘೋಷಿಸಿರುವ ಕಾರ್ಯಕ್ರಮಕ್ಕಾಗಿ ರೂ.2.50 ಕೋಟಿಗಳನ್ನು ಹಂಚಿಕೆ ಮಾಡಿಕೊಂಡು ಅನುಷ್ಠಾನಗೊಳಿಸಲಾಗಿದೆ. ಯೋಜನೆಗಳಿಗೆ ಅಗತ್ಯ ಅನುದಾನ ಲಭ್ಯವಾಗದ ಕಾರಣ ಅರ್ಜಿಗಳನ್ನು ಆಹ್ವಾನಿಸಲಾಗಿರುವುದಿಲ್ಲ.<br>**ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ**<br>• ವಿಶ್ವಕರ್ಮ ಸಮುದಾಯದವರಿಗೆ ನಿಗಮದ 07 ಯೋಜನೆಗಳ ಮೂಲಕ ಸಾಲ-ಸೌಲಭ್ಯಗಳನ್ನು ಒದಗಿಸಲು ದಿನಾಂಕ:07.08.2020 ರಂದು ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಲಾಗಿರುತ್ತದೆ.<br>**ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತ**<br>ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ 2020-21ನೇ ಸಾಲಿಗೆ ಗಂಗಾ ಕಲ್ಯಾಣ ಯೋಜನೆ ಸೇರಿದಂತೆ ವಿವಿಧ ಯೋಜನೆಗಳಡಿ ಅರ್ಜಿ ಆಹ್ವಾನಿಸಲಾಗಿದೆ.<br>**ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ ನಿಯಮಿತ**<br>ಉದ್ಭವಿಸುವುದಿಲ್ಲ. |

...2

| | | |
|---|---|---|
| ಆ) | ಬಂದಿದ್ದಲ್ಲಿ, ಯಾವಾಗ ಅರ್ಜಿಗಳನ್ನು ಆಹ್ವಾನಿಸಲಾಗುವುದು? | <u>ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ</u><br>ಅನುದಾನದ ಲಭ್ಯತೆ ಇಲ್ಲದೆ ಇರುವ ಹಿನ್ನೆಲೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿರುವುದಿಲ್ಲ. 2021-22ನೇ ಸಾಲಿನಲ್ಲಿ ಒದಗಿಸಿರುವ ಅನುದಾನದಲ್ಲಿ ಅರ್ಜಿಯನ್ನು ಆಹ್ವಾನಿಸಲಾಗುವುದು.<br><u>ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ</u><br>ನಿಗಮದಿಂದ ಜಾರಿಗೊಳಿಸುತ್ತಿರುವ 07 ಯೋಜನೆಗಳ ಸೌಲಭ್ಯವನ್ನು ವಿಶ್ವಕರ್ಮ ಸಮುದಾಯದವರಿಗೆ ತಲುಪಿಸಲು 2020ನೇ ಆಗಸ್ಟ್ ಮಾಹೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿರುತ್ತದೆ.<br><u>ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತ</u><br>ಉದ್ಭವಿಸುವುದಿಲ್ಲ<br><u>ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ ನಿಯಮಿತ</u><br>ಉದ್ಭವಿಸುವುದಿಲ್ಲ |

ಸಂಖ್ಯೆ:ಹಿಂವಕ 222 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3260** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 2021-22 ನೇ ಸಾಲಿನಲ್ಲಿ ಸರ್ಕಾರದ ವಿವಿಧ ವಸತಿ ಯೋಜನೆಗಳಲ್ಲಿ ಎಷ್ಟು ಮನೆಗಳನ್ನು ನಿರ್ಮಿಸುವ ಗುರಿ ಸರ್ಕಾರದ ಮುಂದಿದೆ; (ಯೋಜನೆವಾರು/ವಿಧಾನ ಸಭಾ ಕ್ಷೇತ್ರವಾರು ವಿವರ ನೀಡುವುದು) | ರಾಜ್ಯ ಸರ್ಕಾರದ ವಿವಿಧ ವಸತಿ ಯೋಜನೆಯಡಿ ಪ್ರಗತಿಯಲ್ಲಿದ್ದ 9.74 ಲಕ್ಷ ಮನೆಗಳನ್ನು ಮುಂದಿನ 3 ವರ್ಷಗಳಲ್ಲಿ ಪೂರ್ಣಗೊಳಿಸಲು ರೂ.10,194 ಕೋಟಿ ಅನುದಾನವನ್ನು ಕಾಯ್ದಿರಿಸಿ ದಿನಾಂಕ :4.7.2020ರಲ್ಲಿ ಸರ್ಕಾರದ ಆದೇಶ ಹೊರಡಿಸಲಾಗಿತ್ತು.<br><br>ಅದರಂತೆ 2020-21ನೇ ಸಾಲಿನಲ್ಲಿ 95793 ಮನೆಗಳನ್ನು ಪೂರ್ಣಗೊಳಿಸಿದ್ದು, ರೂ 1423 ಕೋಟಿ ವೆಚ್ಚ ಮಾಡಲಾಗಿತ್ತು.<br><br>ಬಾಕಿ ಉಳಿದ 8.79 ಲಕ್ಷ ಮನೆಗಳನ್ನು ಮುಂದಿನ 2 ವರ್ಷಗಳಲ್ಲಿ ಪೂರ್ಣಗೊಳಿಸಬೇಕಾಗಿರುವುದರಿಂದ 2021-22ನೇ ಸಾಲಿನಲ್ಲಿ ಅಂದಾಜು 4 ಲಕ್ಷ ಮನೆಗಳನ್ನು ಪೂರ್ಣಗೊಳಿಸುವ ಗುರಿ ಹೊಂದಲಾಗಿದ್ದು, ಯೋಜನಾವಾರು ವಿವರ ಈ ಕೆಳಕಂಡಂತಿದೆ. |

| ಯೋಜನೆ | ಮನೆಗಳನ್ನು ಪೂರ್ಣಗೊಳಿಸಲು ಉದ್ದೇಶಿಸಿರುವ ಗುರಿ(MPIC) |
|---|---|
| ಬಸವ ವಸತಿ ಯೋಜನೆ | 135000 |
| ಡಾ॥ ಬಿ.ಆರ್ ಅಂಬೇಡ್ಕರ್ ನಿವಾಸ್ | 60000 |
| ದೇವರಾಜ ಅರಸು ವಸತಿ ಯೋಜನೆ | 20000 |
| ವಾಜಪೇಯಿ ವಸತಿ ಯೋಜನೆ | 10000 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 25000 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 150000 |
| **Total** | **4,00,000** |

ವಿಧಾನ ಸಭಾ ಕ್ಷೇತ್ರವಾರು ಗುರಿ ನಿಗಧಿಪಡಿಸಲು ಕ್ರಮ ವಹಿಸಲಾಗುತ್ತಿದೆ.

| | | |
|---|---|---|
| (ಆ) | 2021-22 ನೇ ಸಾಲಿನ ಆಯವ್ಯಯದಲ್ಲಿ ನಿಗಧಿಪಡಿಸಿರುವ ಅನುದಾನವೆಷ್ಟು; (ವಿವರ ನೀಡುವುದು) | 2021-22ನೇ ಸಾಲಿನ ಆಯವ್ಯಯದಲ್ಲಿ ರೂ.2415 ಕೋಟಿ ಅನುದಾನ ಒದಗಿಸಲಾಗಿದ್ದು, ಯೋಜನಾವಾರು ವಿವರ ಕೆಳಕಂಡಂತಿದೆ. |

(ರೂ. ಕೋಟಿಗಳಲ್ಲಿ)

| ಯೋಜನೆ | ಆಯವ್ಯದಲ್ಲಿ ನಿಗಧಿಪಡಿಸಿದ ಅನುದಾನ |
|---|---|
| ಬಸವ ವಸತಿ ಯೋಜನೆ | 600.00 |
| ಡಾ|| ಬಿ.ಆರ್ ಅಂಬೇಡ್ಕರ್ ನಿವಾಸ್ | 500.00 |
| ದೇವರಾಜ ಅರಸು ವಸತಿ ಯೋಜನೆ | 50.00 |
| ವಾಜಪೇಯಿ ವಸತಿ ಯೋಜನೆ | 250.00 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 500.00 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 515.00 |
| **ಒಟ್ಟು** | **2415.00** |

ಸಂಖ್ಯೆ :ವಇ 154 ಹೆಚ್‌ಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3274
ಸದಸ್ಯರ ಹೆಸರು : ಶ್ರೀ ರಾಮಪ್ಪ ಎಸ್. (ಹರಿಹರ)
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹರಿಹರ ತಾಲ್ಲೂಕಿನ ಭದ್ರಾ ನದಿಗೆ ಕಟ್ಟಲಾದ ಎಲ್ಲಾ ಚಾನಲ್‌ಗಳು ದುರಸ್ತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಭದ್ರಾ ಯೋಜನೆಯಡಿ ಹರಿಹರ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಕಾಲುವೆಗಳ ಆಧುನೀಕರಣ ಕಾಮಗಾರಿಗಳನ್ನು 2007-08ನೇ ಸಾಲಿನಲ್ಲಿ ಕೈಗೊಂಡು ಪೂರ್ಣಗೊಳಿಸಲಾಗಿರುತ್ತದೆ. ಯೋಜನೆಗೆ ಲಭ್ಯವಾಗುವ ನಿರ್ವಹಣಾ ಅನುದಾನದಲ್ಲಿ ಆದ್ಯತೆ ಮೇಲೆ ನಿರ್ವಹಣಾ ಕಾಮಗಾರಿಗಳನ್ನು ಕೈಗೊಂಡು ಅಚ್ಚುಕಟ್ಟು ಪ್ರದೇಶಕ್ಕೆ ಸಮರ್ಪಕವಾಗಿ ನೀರನ್ನು ಒದಗಿಸಲಾಗುತ್ತಿದೆ. |
| ಆ) | ಈ ಬಗ್ಗೆ ಎಷ್ಟು ಚಾನಲ್‌ಗಳ ದುರಸ್ತಿಗಾಗಿ ಅನುದಾನ ಮೀಸಲಿಡಲಾಗಿದೆ; (ವಿವರ ನೀಡುವುದು) | 2020-21 ನೇ ಸಾಲಿನಲ್ಲಿ ಲಭ್ಯವಿರುವ ವಾರ್ಷಿಕ ನಿರ್ವಹಣಾ ಅನುದಾನದಲ್ಲಿ, ತುರ್ತಾಗಿ ಕೈಗೊಳ್ಳಬೇಕಾಗಿರುವ ಕಾಲುವೆ ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

ಸಂಖ್ಯೆ:ಜಸಂಇ 79 ಎಂಎಲ್‌ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಅನುಬಂಧ

2020-21 ನೇ ಸಾಲಿನಲ್ಲಿ ಭದ್ರಾ ನಾಲೆಯಲ್ಲಿ ಕೈಗೊಂಡ ದುರಸ್ತಿ ಕಾಮಗಾರಿಗಳ ವಿವರಗಳು.

| Sl. No. | Name of work | Estimated Amount (Rs. In Lakhs) |
|---|---|---|
| 1 | Repairs and Improvements to Damaged Structures in 9th A & 9th B Z/D under MBC | 3.00 |
| 2 | Repairs to Distributory head sluice gates arrangements from Ch:0.00 to 32.00Km of MBC | 2.00 |
| 3 | Repairs to structure and gates of 10th,12th,12th A & 14th Z/D under MBC | 5.00 |
| 4 | Repairs to structure and gates of 11th A,C,D,E,13th,16th & 17th Z/D under MBC | 5.00 |
| 5 | Repairs & Reconditioning of Godbole gates of Devarabelakere Pickup Project. | 5.00 |
| 6 | Repairs to structure and gates ofMinors& PO's of RBC & PO's of LBC under Devarabelakere Pickup Project. | 5.00 |
| 7 | Removal Of Silt and Jungle in selected Reaches of 13th 14th 15th 16th and 17th Zone Distributaries under MBC | 8.00 |
| 8 | Removal Of Silt and Jungle in selected Reaches of 12th 11th A,B,C,D,E and F Zone Distributaries under MBC | 3.00 |
| 9 | Removal Of Silt and Jungle in Hindaskatte Pickup Under 13th Zone Distributory | 4.00 |
| 10 | Removal of silt & jungle in selected reaches of RBC from ch:9.00km to 11.50km and Bannikodu minor canal under D.B.Kere pickup project | 7.00 |
| 11 | Repairs to Gates of HBC, 10th Zone, 12th-A, 12th-B and 13th Zone Distributories and Minors. | 5.00 |
| | Total | 52.00 |

*****

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3305 |
| ಸದಸ್ಯರ ಹೆಸರು | : | ಶ್ರೀ ಅಜಯ್ ಧರ್ಮಸಿಂಗ್ ಡಾ॥ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳಲ್ಲಿ ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಗೆ ಬಿಡುಗಡೆಯಾಗಿರುವ ಅನುದಾನದ ಮೊತ್ತವೆಷ್ಟು; (ವರ್ಷಾವಾರು ಮಾಹಿತಿ ನೀಡುವುದು)</td><td>ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಕಳೆದ ಮೂರು ವರ್ಷಗಳಿಂದ ಬಿಡುಗಡೆಯಾಗಿರುವ ಅನುದಾನದ ವಿವರ ಈ ಕೆಳಕಂಡಂತಿದೆ.
<table>
<tr><th>ಆರ್ಥಿಕ ವರ್ಷ</th><th>ಮಂಡಳಿಗೆ ಬಿಡುಗಡೆ ಮಾಡಿದ ಅನುದಾನ (ರೂ.ಕೋಟಿಗಳ)</th></tr>
<tr><td>2017-18</td><td>800.00</td></tr>
<tr><td>2018-19</td><td>1000.00</td></tr>
<tr><td>2019-20</td><td>1125.00</td></tr>
</table>
</td></tr>
<tr><td>ಆ)</td><td>ಬಿಡುಗಡೆಗೊಳಿಸಿದ ಅನುದಾನಕ್ಕನುಗುಣವಾಗಿ ಆಯಾ ಸಾಲಿನಲ್ಲಿಯೇ ಮಂಜೂರಾದ ಯಾವ ಕಾಮಗಾರಿಗಳನ್ನು ನಿಗದಿತ ಕಾಲಾವಧಿಯಲ್ಲಿ ಪೂರ್ಣಗೊಳಿಸಲಾಗಿದೆ ಹಾಗೂ ಬಾಕಿ ಇರುವ ಕಾಮಗಾರಿಗಳು ಯಾವುವು; (ಪೂರ್ಣ ಮಾಹಿತಿ ನೀಡುವುದು)</td><td>ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಡಿ 2017-18, 2018-19 ಬಿಡುಗಡೆಗೊಳಿಸಿದ ಅನುದಾನಕ್ಕೆ ಅನುಗುಣವಾಗಿ ಮತ್ತು 2019-20ನೇ ಸಾಲಿನಲ್ಲಿ ಪೂರ್ಣಗೊಳಿಸಿರುವ ಪ್ರಗತಿಯಲ್ಲಿರುವ ಹಾಗೂ ಇನ್ನೂ ಪ್ರಾರಂಭವಾಗದೇ ಇರುವ ಕಾಮಗಾರಿಗಳ ವಿವರಗಳು ಈ ಕೆಳಗಿನಂತಿವೆ,
<table>
<tr><th>ವರ್ಷ</th><th>ಒಟ್ಟು ಕಾಮಗಾರಿಗಳ ಸಂಖ್ಯೆ</th><th>ಪೂರ್ಣಗೊಳಿಸಿದ ಕಾಮಗಾರಿಗಳು</th><th>ಪ್ರಗತಿಯಲ್ಲಿರುವ ಕಾಮಗಾರಿಗಳು</th><th>ಪ್ರಾರಂಭಿಸಬೇಕದ ಕಾಮಗಾರಿಗಳು</th></tr>
<tr><td>2017-18</td><td>4405</td><td>4316</td><td>89</td><td>0</td></tr>
<tr><td>2018-19</td><td>4137</td><td>3677</td><td>454</td><td>6</td></tr>
<tr><td>2019-20</td><td>4018</td><td>2288</td><td>1411</td><td>319</td></tr>
<tr><td>ಒಟ್ಟು</td><td>12560</td><td>10281</td><td>1954</td><td>325</td></tr>
</table>
</td></tr>
</table>

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | 2020–21ನೇ ಸಾಲಿನಲ್ಲಿ ಯಾವ ಕಾಮಗಾರಿಗಳು ಹಾಗೂ ಎಷ್ಟು ಮೊತ್ತದ ಅಭಿವೃದ್ಧಿ ಕಾಮಗಾರಿಗಳ ಕ್ರಿಯಾಯೋಜನೆಗೆ ಮಂಜೂರಾಗಿ ನೀಡಲಾಗಿದೆ. | 2020–21ನೇ ಸಾಲಿನಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಈ ಕೆಳಗಿನ ಯೋಜನೆಗಳಿಗೆ ಹಂಚಿಕೆಯಾಗಿರುವ ರೂ.1061.13 ಕೋಟಿಗಳ ಕ್ರಿಯಾಯೋಜನೆಗೆ ಅನುಮೋದನೆ ನೀಡಲಾಗಿದೆ. (ರೂ.ಲಕ್ಷಗಳಲ್ಲಿ) |

| ಕ್ರ ಸಂ. | ವಿವರ | ಹಂಚಿಕೆ ಮಾಡಿದ ಅನುದಾನ | ಅನುಮೋದನೆ ನೀಡಿರುವ ಕ್ರಿಯಾಯೋಜನೆ |
|---|---|---|---|
| 1 | ಮೈಕ್ರೋ | 68930.27 | 66040.24 |
| 2 | ಮ್ಯಾಕ್ರೋ | 29541.55 | 29541.55 |
| 3 | ಅಧ್ಯಕ್ಷರ ವಿವೇಚನಾ ನಿಧಿ (CDQ) | 1131.86 | 1131.86 |
| 4 | ಸರ್ಕಾರದ ವಿವೇಚನಾ ನಿಧಿ (GDQ) | 2263.72 | 2263.72 |
| 5 | ಮುಖ್ಯಮಂತ್ರಿ ವಿವೇಚನಾ ನಿಧಿ (CMDQ) | 3395.58 | 3395.58 |
| 6 | ಪ್ರಾದೇಶಿಕ ನಿಧಿ (RF) | 6791.16 | 2608.42 |
| 7 | ಆಡಳಿತ (ADM) | 1131.86 | 1131.86 |
| | ಒಟ್ಟು | **113186.00** | **106113.23** |

**ಪಿಡಿಎಸ್ 29 ಹೆಚ್‌ಕೆಡಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3346 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗೇಪಲ್ಲಿ ಕ್ಷೇತ್ರದಲ್ಲಿ ಇರುವ ವಿದ್ಯಾರ್ಥಿನಿಲಯ ಸಂಖ್ಯೆ ಎಷ್ಟು; ಈ ವಿದ್ಯಾರ್ಥಿನಿಲಯಗಳಿಗೆ ಮಂಜೂರಾತಿ ಯಾಗಿರುವ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಬಾಗೇಪಲ್ಲಿ ಕ್ಷೇತ್ರದಲ್ಲಿ ಒಟ್ಟು 18 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, 1445 ವಿದ್ಯಾರ್ಥಿಗಳಿಗೆ ಮಂಜೂರಾತಿ ಸೌಲಭ್ಯವನ್ನು ಕಲ್ಪಿಸಲಾಗಿದ್ದು, ವಿವರ ಕೆಳಕಂಡಂತಿದೆ.<br><br>ವಿವರ / ವಿದ್ಯಾರ್ಥಿನಿಲಯಗಳ ಸಂಖ್ಯೆ / ನಿಲಯಾರ್ಥಿಗಳ ಸಂಖ್ಯೆ<br>ಮೆಟ್ರಿಕ್-ಪೂರ್ವ / 9 / 495<br>ಮೆಟ್ರಿಕ್-ನಂತರ / 9 / 950<br>**ಒಟ್ಟು** / **18** / **1445** |
| ಆ) | ಈ ಕ್ಷೇತ್ರದಲ್ಲಿ ಹಾಲಿ ಮಂಜೂರಾತಿಗಿಂತ ಹೆಚ್ಚಿನ ವಿದ್ಯಾರ್ಥಿಗಳ ಪ್ರವೇಶಕ್ಕೆ ಬೇಡಿಕೆ ಇರುವುದು ನಿಜವೇ; | ಹೌದು.<br>2020-21ನೇ ಸಾಲಿನಲ್ಲಿ ಕೋವಿಡ್-19ರ ಸಂಬಂಧ ವಿದ್ಯಾರ್ಥಿನಿಲಯಗಳನ್ನು ಪ್ರಸ್ತುತ ನವೆಂಬರ್ ಮಾಹೆಯಿಂದ ಪ್ರಾರಂಭಿಸಲಾಗಿದ್ದು, ಬಾಗೇಪಲ್ಲಿ ಕ್ಷೇತ್ರದಲ್ಲಿನ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಿಗೆ ನವೀಕರಣ ಮತ್ತು ಹೊಸದಾಗಿ 1169 ಅರ್ಜಿಗಳು ಸ್ವೀಕೃತಗೊಂಡಿದ್ದು, 950 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಿದ್ದು, 219 ಅರ್ಜಿಗಳು ಬಾಕಿ ಉಳಿದಿರುತ್ತವೆ ಹಾಗೂ ಮೆಟ್ರಿಕ್-ಪೂರ್ವ (6 ರಿಂದ 10ನೇ ತರಗತಿವರೆಗೆ) ವಿದ್ಯಾರ್ಥಿನಿಲಯಗಳಿಗೆ ಪ್ರವೇಶ ಪ್ರಕ್ರಿಯೆಯು ಚಾಲ್ತಿಯಲ್ಲಿರುತ್ತದೆ. |
| ಇ) | ಹಾಗಿದ್ದಲ್ಲಿ, ಮೂಲಭೂತ ಸೌಕರ್ಯಗಳಿರುವ ಕಟ್ಟಡಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಳ ಮಾಡುವ ಪ್ರಸ್ತಾವನೆ ಇದೆಯೇ; ಇದ್ದಲ್ಲಿ ಯಾವಾಗ ಹೆಚ್ಚಳ ಮಾಡಲಾಗುವುದು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ (ಬಾಗೇಪಲ್ಲಿ ಟೌನ್ ನ ಮೆಟ್ರಿಕ್-ನಂತರದ ಬಾಲಕರ ವಿದ್ಯಾರ್ಥಿನಿಲಯವನ್ನು ಒಳಗೊಂಡಂತೆ) ಒಟ್ಟು ಸಂಖ್ಯಾಬಲದಲ್ಲಿ ಶೇ.5 ರಷ್ಟು ಸಂಖ್ಯಾಬಲ ಹೆಚ್ಚಳ ಮಾಡುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿದೆ. |

...2

| | | |
|---|---|---|
| ಈ) | ಈ ಶೈಕ್ಷಣಿಕ ವರ್ಷಕ್ಕೆ ಬಾಗೇಪಲ್ಲಿ ಕ್ಷೇತ್ರದ ಎಲ್ಲಾ ವಿದ್ಯಾರ್ಥಿನಿಲಯಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆಯನ್ನು ತಲಾ 25 ರಂತೆ ಹೆಚ್ಚಳ ಮಾಡಲಾಗುವುದೇ; (ವಿವರ ನೀಡುವುದು) | ಉದ್ಭವಿಸುವುದಿಲ್ಲ. |
| ಉ) | ಗುಡಿಬಂಡೆ ತಾಲ್ಲೂಕಿನ ವಿದ್ಯಾರ್ಥಿನಿಲಯದಲ್ಲಿರುವ ಹೆಚ್ಚುವರಿ ವಿದ್ಯಾರ್ಥಿಗಳ ಸಂಖ್ಯೆಯನ್ನು ಬಾಗೇಪಲ್ಲಿ ತಾಲ್ಲೂಕಿನ ವಿದ್ಯಾರ್ಥಿನಿಲಯಕ್ಕೆ ನೀಡಲು ಆದೇಶ ಮಾಡಲಾಗುವುದೇ; | ಗುಡಿಬಂಡೆ ತಾಲ್ಲೂಕಿನ ವಿದ್ಯಾರ್ಥಿನಿಲಯದಲ್ಲಿರುವ ಹೆಚ್ಚುವರಿ ವಿದ್ಯಾರ್ಥಿಗಳ ಸಂಖ್ಯೆಯನ್ನು ಬಾಗೇಪಲ್ಲಿ ತಾಲ್ಲೂಕಿನ ವಿದ್ಯಾರ್ಥಿನಿಲಯಕ್ಕೆ ವರ್ಗಾಯಿಸುವ ಬಗ್ಗೆ ಜಿಲ್ಲೆಯಿಂದ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |

ಸಂಖ್ಯೆ:ಹಿಂವಕ 224 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 3347 |
| ಸದಸ್ಯರ ಹೆಸರು | ಶ್ರೀ ಸುಬ್ಬಾರೆಡ್ಡಿ. ಎಸ್.ಎನ್. |
| ಉತ್ತರಿಸುವ ದಿನಾಂಕ: | 22-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳಲ್ಲಿ ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರಕ್ಕೆ ಮುಜರಾಯಿ ಇಲಾಖೆಯ ವತಿಯಿಂದ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; (ವಿವರ ನೀಡುವುದು) | ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಧಾರ್ಮಿಕ ದತ್ತಿ ಇಲಾಖಾ ವತಿಯಿಂದ ಒಟ್ಟು ರೂ.31.68 ಲಕ್ಷಗಳ ಅನುದಾನ ಮಂಜೂರು ಮಾಡಲಾಗಿದೆ. ವಿವರ ಕೆಳಕಂಡಂತಿದೆ. |

(ರೂ.ಲಕ್ಷಗಳಲ್ಲಿ)

| ಯೋಜನೆ ವಿವರ | 2017-18 | 2018-19 | 2019-20 |
|---|---|---|---|
| ಆರಾಧನಾ ಯೋಜನೆ | 0.89 | 4.24 | 4.24 |
| ಪರಿಶಿಷ್ಟಜಾತಿ ಉಪ ಯೋಜನೆ | 8.92 | 3.38 | 6.76 |
| ಗಿರಿಜನ ಉಪ ಯೋಜನೆ | 1.33 | 1.01 | 1.01 |
| ಒಟ್ಟು | 11.14 | 8.63 | 12.01 |

| | | |
|---|---|---|
| ಆ | ಈ ಪೈಕಿ ಯಾವ ಯಾವ ದೇವಸ್ಥಾನಗಳ ಜೀರ್ಣೋದ್ಧಾರ ಮಾಡಲಾಗಿದೆ? (ವಿವರ ನೀಡುವುದು) | ಮೇಲ್ಕಂಡ ಯೋಜನೆಗಳಡಿಯಲ್ಲಿ ಬಿಡುಗಡೆಯಾದ ಮೊತ್ತದಲ್ಲಿ ಜೀರ್ಣೋದ್ಧಾರ ಮಾಡಲಾದ ದೇವಾಲಯಗಳ ವಿವರವನ್ನು **ಅನುಬಂಧದಲ್ಲಿ** ಒದಗಿಸಿದೆ. |

(ಸಂಖ್ಯೆ:ಕಂಇ 81 ಮುಸಪ್ರ 2021)

**(ಕೋಟ ಶ್ರೀನಿವಾಸ ಪೂಜಾರಿ)**
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಂಜುನಾಥ ಹೆಚ್.ಪಿ (ಹುಣಸೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3367** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಜಾರಿಯಲ್ಲಿರುವ ವಿವಿಧ ವಸತಿ ಯೋಜನೆಗಳಡಿಯಲ್ಲಿ ಹುಣಸೂರು ವಿಧಾನ ಸಭಾ ಕ್ಷೇತ್ರಕ್ಕೆ ಮಂಜೂರಾಗಿರುವ ಮನೆಗಳೆಷ್ಟು; ಈ ಪೈಕಿ ನಿರ್ಮಾಣವಾಗಿರುವ, ರದ್ದಾಗಿರುವ, ನಿರ್ಮಾಣ ಹಂತದಲ್ಲಿರುವ ಮನೆಗಳೆಷ್ಟು; (ಸಂಪೂರ್ಣ ವಿವರ ನೀಡುವುದು) | 2017-18 ರಿಂದ 2019-20 ರವರೆಗೆ ವಿವಿಧ ವಸತಿ ಯೋಜನೆಗಳಡಿಯಲ್ಲಿ ಹುಣಸೂರು ವಿಧಾನ ಸಭಾ ಕ್ಷೇತ್ರಕ್ಕೆ ಮಂಜೂರಾಗಿರುವ ಮನೆ, ರದ್ದಾಗಿರುವ ಮನೆ ಮತ್ತು ನಿರ್ಮಾಣ ಹಂತದಲ್ಲಿರುವ ಮನೆಗಳ ವಿವರ ಕೆಳಕಂಡಂತಿದೆ. |

| ಯೋಜನೆ | ಮಂಜೂರಾದ ಮನೆ | ಪ್ರಗತಿಯಲ್ಲಿರುವ ಮನೆಗಳು | ರದ್ದಾಗಿರುವ ಮನೆ |
|---|---|---|---|
| ಬಸವ ವಸತಿ ಯೋಜನೆ | 2197 | 845 | 395 |
| ಪ್ರಧಾನ ಮಂತ್ರಿ ಅವಾಸ್ ಯೋಜನೆ (ಗ್ರಾ) | 428 | 236 | 0 |
| ದೇವರಾಜು ಅರಸು ವಸತಿ ಯೋಜನೆ (ಗ್ರಾಮೀಣ) | 11 | 6 | 0 |
| ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ) | 870 | 315 | 273 |
| ವಾಜಪೇಯಿ ನಗರ ವಸತಿ ಯೋಜನೆ | 213 | 83 | 44 |
| ಅಂಬೇಡ್ಕರ್ ನಿವಾಸ್ ಯೋಜನೆ (ನಗರ) | 69 | 17 | 21 |
| ಪ್ರಧಾನ ಮಂತ್ರಿ ಅವಾಸ್ ಯೋಜನೆ (ನಗರ) | 136 | 48 | 0 |
| ಒಟ್ಟು | **3924** | **1550** | **733** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಸದರಿ ಕ್ಷೇತ್ರದಲ್ಲಿ ಕೆಲವು ಫಲಾನುಭವಿಗಳ ಮನೆಗಳು, ಅರ್ಧಕ್ಕೆ ನಿಂತಿದ್ದು, ಈ ಮನೆಗಳನ್ನು ಪೂರ್ಣಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಮೇಲ್ಕಂಡ ವಸತಿ ಯೋಜನೆಗಳಡಿಯಲ್ಲಿ ಮನೆಗಳನ್ನು ಫಲಾನುಭವಿಗಳು ಸ್ವತ: ತಾವೇ ನಿರ್ಮಿಸಿಕೊಳ್ಳುತ್ತಿದ್ದು, ಪ್ರಗತಿಗೆ ಅನುಗುಣವಾಗಿ ಸರ್ಕಾರ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಫಲಾನುಭವಿಗಳು ಸರ್ಕಾರದ ಸಹಾಯಧನದೊಂದಿಗೆ ಸ್ವವಂತಿಕೆ ಹಾಕಿ ಮನೆಯನ್ನು ಪೂರ್ಣಗೊಳಿಸುತ್ತಿದ್ದು, ತ್ವರಿತಗತಿಯಲ್ಲಿ ಮನೆಯನ್ನು ಪೂರ್ಣಗೊಳಿಸುವಂತೆ ಅನುಷ್ಠಾನಾಧಿಕಾರಿಗಳಿಂದ ಫಲಾನುಭವಿಗಳಿಗೆ ತಿಳಿಸಲಾಗುತ್ತಿದೆ. |

| | | |
|---|---|---|
| (ಇ) | ಫಲಾನುಭವಿಗಳು ಸಾಲ ಮಾಡಿ ಮನೆ ನಿರ್ಮಿಸಿಕೊಂಡಿದ್ದು, ಹಣ ಪಾವತಿಯಾಗದೆ ಕಟ್ಟಡಗಳು ಅಪೂರ್ಣಗೊಂಡಿರುವುದರಿಂದ ಸಂಕಷ್ಟಕ್ಕೆ ಸಿಲುಕಿರುವ ಫಲಾನುಭವಿಗಳಿಗೆ ಸರ್ಕಾರವು ಕೂಡಲೇ ಹಣ ಬಿಡುಗಡೆಗೊಳಿಸಲು ಕ್ರಮ ಕೈಗೊಳ್ಳುವುದೇ ? (ವಿವರ ನೀಡುವುದು) | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳ ಪೈಕಿ ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಮನೆಗಳು ಅನರ್ಹ ಫಲಾನುಭವಿಗಳ ಆಯ್ಕೆ ಕಂಡುಬಂದಿರುವುದರಿಂದ ಸರ್ಕಾರವು ವಿವಿಧ ವಸತಿ ಯೋಜನೆಗಳಡಿ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ:ವಇ 54 ಹೆಚ್‌ಎಎಂ 2019, ದಿನಾಂಕ:16.11.2019 ರಲ್ಲಿ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ GPS ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾಪಂಚಾಯತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ ಅರ್ಹಗೊಂಡ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br><br>ವಿಜಿಲ್ ಆಪ್ ಮೂಲಕ ಪರಿಶೀಲಿಸಿ, ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಲ್ಲಿ ಆಗುತ್ತಿರುವ ವಿಳಂಬವನ್ನು ಗಮನಿಸಿ ಸರ್ಕಾರವು ಆದೇಶ ಸಂಖ್ಯೆ :ವಇ 12 ಹೆಚ್‌ಎಹೆಚ್ 2020, ದಿನಾಂಕ:01.02.2021 & 02.02.2021 ರಲ್ಲಿ ವಿಜಿಲ್ ಆಪ್ ಮೂಲಕ ಪರಿಶೀಲಿಸುವುದಕ್ಕೆ ದಿನಾಂಕ :31.03.2021 ರವರಗೆ ವಿನಾಯಿತಿ ನೀಡಲಾಗಿದ್ದು, ಅದರಂತೆ ಪ್ರಸ್ತುತ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವ ವಿಧಾನಗಳನ್ನು ಸರಳೀಕರಣಗೊಳಿಸಿ ಭೌತಿಕ ಪ್ರಗತಿಗನುಗುಣವಾಗಿ ಎಲ್ಲಾ ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. |

ಸಂಖ್ಯೆ :ವಇ 158 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3386 |
| 2 | ಸದಸ್ಯರ ಹೆಸರು | ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. (ಬೈಂದೂರು) |
| 3 | ಉತ್ತರಿಸಬೇಕಾದ ದಿನಾಂಕ | 22.03.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆ, ಕುಂದಾಪುರ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಯಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ ಎಷ್ಟು; ಇದರಲ್ಲಿ ಪ್ರಸ್ತುತ ಭರ್ತಿಯಾದ ಹುದ್ದೆಗಳ ಸಂಖ್ಯೆ ಎಷ್ಟು; (ಭೂಮಾಪಕರು ಸೇರಿದಂತೆ ಎಲ್ಲಾ ಹುದ್ದೆಗಳ ಸಂಪೂರ್ಣ ಮಾಹಿತಿ ಒದಗಿಸುವುದು) | ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಯಲ್ಲಿ ಮಂಜೂರಾದ/ಭರ್ತಿಯಾದ ಹುದ್ದೆಗಳ ವಿವರ ಈ ಕೆಳಕಂಡಂತಿದೆ:- |

| ಕ್ರ ಸಂ | ಹುದ್ದೆಯ ವಿವರ | ಮಂಜೂರಿ | ಭರ್ತಿ | ಖಾಲಿ |
|---|---|---|---|---|
| 1 | ಭೂ.ಸ.ನಿ. | 1 | 0 | 1 |
| 2 | ಅಧೀಕ್ಷಕರು (ತಾಂ) | 1 | 1 | 0 |
| 3 | ತಪಾಸಕರು | 4 | 4 | 0 |
| 4 | ಪ್ರ.ದ.ಸ. | 1 | 1 | 0 |
| 5 | ಭೂಮಾಪಕರು | 32 | 24 | 8 |
| 6 | ಬಾಂದು ಜವಾನರು | 14 | 0 | 14 |
| 7 | ಕಛೇರಿ ಜವಾನರು | 1 | 1 | 0 |
| | **ಒಟ್ಟು** | **54** | **31** | **23** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಈ ಕಛೇರಿಗೆ ಮೋಜಿಣಿಗಾಗಿ ಸಲ್ಲಿಕೆಯಾದ ಅರ್ಜಿಗಳಲ್ಲಿ ಬಾಕಿ ಇರುವ ಅರ್ಜಿಗಳ ಸಂಖ್ಯೆ ಎಷ್ಟು; ಬಾಕಿ ಇರಲು ಕಾರಣಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕುಂದಾಪುರ ತಾಲ್ಲೂಕಿನಲ್ಲಿ 2020-21ನೇ ಸಾಲಿನಲ್ಲಿ ಮೋಜಿಣಿ ತಂತ್ರಾಂಶದಡಿ ವಿವಿಧ ರೀತಿಯ ಅಳತೆ ಕೋರಿ ಸ್ವೀಕೃತಿಯಾದ ಅರ್ಜಿಗಳ ಪ್ರಗತಿ ವಿವರ. |

| ಕ್ರ | ತರಹೆ | ಆ. ಶಿಲ್ಕು | ಸ್ವೀಕೃತಿ | ಒಟ್ಟು | ವಿಲೆ | ಬಾಕಿ |
|---|---|---|---|---|---|---|
| 1 | 11(ಇ) | 1946 | 4105 | 6051 | 3959 | 2092 |
| 2 | ತತ್ಕಾಲ್ ಪೋಡಿ | 829 | 652 | 1481 | 509 | 972 |
| 3 | ಅನ್ಯಕ್ರಾಂತ | 525 | 1792 | 2317 | 1688 | 629 |
| 4 | ಹದ್ದುಬಸ್ತು | 91 | 1047 | 1138 | 900 | 238 |
| 5 | ಇತರೆ | 11 | 263 | 274 | 272 | 2 |
| 6 | ಇ-ಸ್ವತ್ತು | 0 | 0 | 0 | 0 | 0 |
| | **ಒಟ್ಟು** | **3402** | **7859** | **11261** | **7328** | **3933** |

**ಪೋಡಿ ಪ್ರಕರಣಗಳು ಬಾಕಿ ಉಳಿಯಲು ಕಾರಣಗಳು:-**

1] ಆಕಾರಬಂದು ಮತ್ತು ಪಹಣಿಗಳಲ್ಲಿ ದಾಖಲಾಗಿರುವ ವಿಸ್ತೀರ್ಣದಲ್ಲಿ ವ್ಯತ್ಯಾಸಗಳಿರುವುದು.

2] ಪಹಣಿಯ ಕಾಲಂ-3 ಮತ್ತು 9 ರಲ್ಲಿ ವ್ಯತ್ಯಾಸಗಳಿರುವುದು.

3] ಪಹಣಿ ತಿದ್ದುಪಡಿ ಮಾಡಲು ಅವಶ್ಯಕವಾದ ಹಿಂದಿನ ಕಂದಾಯ ದಾಖಲೆಗಳು (ಮ್ಯುಟೇಷನ್, ಪಹಣಿ, ಮಂಜೂರಿ ಆದೇಶಗಳು ಇತರೆ) ಲಭ್ಯವಾಗದಿರುವುದು.

| | | |
|---|---|---|
| | | 4] ಭೂಮಂಜೂರಾತಿ ಪ್ರಕರಣಗಳಲ್ಲಿ ನಮೂನೆ 1-5 ಭರ್ತಿ ಮಾಡುವಲ್ಲಿ ಮಂಜೂರಾತಿ ದಾಖಲೆಗಳು ಸರಿಯಾಗಿ ಲಭ್ಯವಾಗದೇ ಇರುವುದು.<br>5] ಭೂಮಂಜೂರಾತಿ ಪ್ರಕರಣಗಳಲ್ಲಿ ಮಂಜೂರಿ ಮತ್ತು ಅನುಭವ ವಿಸ್ತೀರ್ಣಗಳಲ್ಲಿ ವ್ಯತ್ಯಾಸ ಇರುವುದು. ಜಮೀನಿನ ಆಕಾರಬಂದಿನ ವಿಸ್ತೀರ್ಣಕ್ಕಿಂತ ಹೆಚ್ಚಿನ ಕ್ಷೇತ್ರಕ್ಕೆ ಮಂಜೂರಿ ಆದೇಶ ಮಾಡಿರುವುದರಿಂದ ಪಹಣಿ ಸರಿಪಡಿಸುವಲ್ಲಿ ತೊಂದರೆ ಇರುವುದು.<br>6] ಜಮೀನಿನ ಮೂಲ ಭೂದಾಖಲೆಗಳು / ಕಂದಾಯ ದಾಖಲೆಗಳು ಶಿಥಿಲವಾಗಿರುವುದನ್ನು ಪುನರ್ನಿರ್ಮಾಣ ಮಾಡಲು ಹೆಚ್ಚಿನ ಕಾಲಾವಕಾಶ ಬೇಕಾಗುವುದು.<br>7] ಅಳತೆ ವೇಳೆ ಜಮೀನಿನ ಹಕ್ಕು ಮತ್ತು ಗಡಿ ವಿಚಾರದಲ್ಲಿ ತಕರಾರು ಇರುವುದರಿಂದ,<br>8] ನ್ಯಾಯಾಲಯದಲ್ಲಿ ವಿವಾದಗಳಿರುವುದರಿಂದ<br><br>ಮೇಲ್ಕಂಡ ಕಾರಣಗಳಿಂದ ಪೋಡಿ ಪ್ರಕರಣಗಳು ವಿಲೇವಾರಿಯಾಗದೇ ಬಾಕಿ ಉಳಿದಿರುತ್ತವೆ. |
| ಇ) | ಕುಂದಾಪುರ ಮತ್ತು ಬೈಂದೂರು ತಾಲ್ಲೂಕಿನಲ್ಲಿ ಭೂಮಾಪಕರ ಕೊರತೆಯಿಂದ ಮೋಜಿಣಿಗೆ ಸಲ್ಲಿಕೆ ಯಾದ ಅರ್ಜಿಗಳ ವಿಲೇವಾರಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;ಬಂದಿದ್ದಲ್ಲಿ, ಭೂಮಾಪಕರ ನೇಮಕಾತಿಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ.<br>ಖಾಲಿ ಇರುವ ಭೂಮಾಪಕರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಹಾಗೂ ವರ್ಗಾವಣೆ ಮೂಲಕ ಭರ್ತಿ ಮಾಡಲಾಗುವುದು. |
| ಈ) | ಬೈಂದೂರು ಹೊಸ ತಾಲ್ಲೂಕಾಗಿ ರಚನೆಯಾಗಿದ್ದು, ಇಲ್ಲಿಗೆ ತಾಲ್ಲೂಕು ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಯನ್ನು ಯಾವಾಗ ಪ್ರಾರಂಭಿಸಲಾಗುವುದು? | ರಾಜ್ಯದಲ್ಲಿ ಹೊಸದಾಗಿ ರಚನೆಯಾದ ತಾಲ್ಲೂಕುಗಳಲ್ಲಿ ತಾಲ್ಲೂಕು ಕಛೇರಿ ಮತ್ತು ತಾಲ್ಲೂಕು ಪಂಚಾಯತ್ ಕಛೇರಿಗಳು ಪೂರ್ಣವಾಗಿ ಕಾರ್ಯಾರಂಭ ಮಾಡಿದ ನಂತರ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಯನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸುವಂತೆ ಆರ್ಥಿಕ ಇಲಾಖೆಯು ಅಭಿಪ್ರಾಯಿಸಿರುತ್ತದೆ. ಅದರಂತೆ ಪರಿಶೀಲಿಸಿ ಕ್ರಮವಹಿಸಲಾಗುವುದು. |

**ಸಂಖ್ಯೆ: ಕಂಇ 59 ಎಸ್‌ಎಸ್‌ಸಿ 2021**

**(ಆರ್.ಅಶೋಕ)**
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3405 |
| ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | 23-03-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಬಕಾರಿ ಇಲಾಖೆಯು ನೀಡುತ್ತಿರುವ ವಿವಿಧ ವರ್ಗದ ಪರವಾನಗಿಗಳನ್ನು ಪಡೆಯುವಲ್ಲಿ ನಿಗದಿಪಡಿಸಿರುವ ಕಾನೂನು ನೀತಿ ನಿಯಮಗಳು ಯಾವುವು; | ರಾಜ್ಯದಲ್ಲಿ ಅಬಕಾರಿ ಪರವಾನಗಿಗಳನ್ನು ನೀಡುವಾಗ ಈ ಕೆಳಕಂಡ ನಿಯಮಗಳಡಿಯಲ್ಲಿನ ನಿಯಮಗಳನ್ನು ಪಾಲಿಸಿ ನೀಡಲಾಗುತ್ತಿದೆ. ಪ್ರಸ್ತುತ ಸರ್ಕಾರವು ನಿರ್ಬಂಧಿಸಿರುವ ಹಿನ್ನಲೆಯಲ್ಲಿ ಸಿಎಲ್-2 ಮತ್ತು ಸಿಎಲ್-9 ಸನ್ನದುಗಳನ್ನು ಹೊಸದಾಗಿ ಮಂಜೂರು ಮಾಡಲಾಗುತ್ತಿಲ್ಲ.<br>1) **ಸಿಎಲ್-4, ಸಿಎಲ್-6ಎ, ಸಿಎಲ್-7, ಸಿಎಲ್-8, ಸಿಎಲ್-8ಎ, ಸಿಎಲ್-8ಬಿ, ಸಿಎಲ್-11-ಸಿ, ಸಿಎಲ್-16, ಸಿಎಲ್-17, ಮತ್ತು ಸಿಎಲ್-18 ಸನ್ನದುಗಳು:-** ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು, 1968 ರಡಿಯಲ್ಲಿನ ನಿಯಮಗಳಲ್ಲಿ ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು.<br>2) **ಸಿಎಲ್-4, ಸಿಎಲ್-6ಎ, ಸಿಎಲ್-7, ಸಿಎಲ್-9 ಸನ್ನದುಗಳಿಗೆ ಹೊಂದಿಕೊಂಡಿರುವ ಆರ್ ವಿಬಿ ಸನ್ನದುಗಳು:-** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಚಿಲ್ಲರೆಯಾಗಿ ಬೀರ್ ನ್ನು ಮಾರಾಟ ಮಾಡುವ ಗುತ್ತಿಗೆ) ನಿಯಮ 1976 ರಡಿಯಲ್ಲಿನ ನಿಯಮಗಳು.<br>3) **ಮೈಕ್ರೋಬ್ರೀವರಿ ಸನ್ನದುಗಳು:-** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಬ್ರೀವರಿ) (ತಿದ್ದುಪಡಿ) ನಿಯಮಗಳು 2010 ರಡಿಯಲ್ಲಿ ರೂಪಿತವಾಗಿರುವ ನಿಯಮಗಳು ಮತ್ತು ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು<br>4) **ವೈನ್ ಟಾವರಿನ್ / ವೈನ್ ಬೋಟಿಕ್ ಸನ್ನದುಗಳು:-** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಚಿಲ್ಲರೆಯಾಗಿ ವೈನ್ ನ್ನು ಮಾರಾಟ ಮಾಡುವ ಹಕ್ಕು) ನಿಯಮಗಳು 2008 ರಡಿಯಲ್ಲಿನ ನಿಯಮಗಳು.<br>ಮುಂದುವರೆದು ಈ ಎಲ್ಲಾ ಸನ್ನದುಗಳನ್ನು ಮಂಜೂರು |

| | | |
|---|---|---|
| | | ಮಾಡುವಾಗ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳನ್ನು ಪಾಲಿಸುವ ಜೊತೆಗೆ ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು, 1968 ರ ನಿಯಮ 4 (ಬಿ) ಪ್ರಕಾರ ಮತ್ತು ಕರ್ನಾಟಕ ಅಬಕಾರಿ (ಬ್ರೀವರಿ) ನಿಯಮಗಳು 1967 ರ ನಿಯಮ 5 (ಬಿ) ರನ್ವಯ ಅನರ್ಹರಾಗದಿರುವ ಬಗ್ಗೆ ಸ್ವಯಂ ಘೋಷಿತ ಮುಚ್ಚಳಿಕೆಯನ್ನು ಪಡೆಯಲಾಗುತ್ತಿರುತ್ತದೆ. |
| ಆ) | ಸದರಿ ಪರಿವಾನಗಿಗಳನ್ನು ನೀಡಿದ ನಂತರ ಅವುಗಳ ದುರುಪಯೋಗ ಮತ್ತು ಸರ್ಕಾರದ ನೀತಿ ನಿಬಂಧನೆಗಳನ್ನು ಉಲ್ಲಂಘಿಸಿರುವವರ ಮೇಲೆ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಪ್ರಕರಣಗಳು ದಾಖಲಾಗಿವೆ; ಅಂತಹವರ ಮೇಲೆ ಕೈಗೊಂಡ ಕಾನೂನು ಕ್ರಮಗಳೇನು; | ಮದ್ಯದ ಅಂಗಡಿಗಳು ವ್ಯವಹರಣೆಯ ಸಮಯದಲ್ಲಿ ಅಬಕಾರಿ ನಿಯಮಗಳ ಅಥವಾ ಸನ್ನದು ಷರತ್ತುಗಳ ಉಲ್ಲಂಘನೆ ವಿರುದ್ಧ ಕಾನೂನು ರೀತ್ಯಾ ಕ್ರಮ ಕೈಗೊಂಡು ಪ್ರಕರಣಗಳನ್ನು ದಾಖಲು ಮಾಡಲಾಗುತ್ತಿದೆ. 2019–20 (ಜುಲೈಯಿಂದ ಜೂನ್ ವರೆಗೆ) ಮತ್ತು 2020–21 (ಜುಲೈಯಿಂದ ಫೆಬ್ರವರಿವರೆಗೆ) ಅಬಕಾರಿ ಸಾಲುಗಳಲ್ಲಿ ಕ್ರಮವಾಗಿ 10832 ಮತ್ತು 7938 ಪ್ರಕರಣಗಳನ್ನು ದಾಖಲು ಮಾಡಲಾಗಿದೆ. ದಾಖಲಾದ ಮೊಕದ್ದಮೆಗಳಲ್ಲಿ ದಂಡ ವಿಧಿಸಿ ಇತ್ಯರ್ಥಪಡಿಸಲಾಗುತ್ತಿದೆ. |
| ಇ) | ಕಳೆದ 02 ವರ್ಷಗಳಲ್ಲಿ ಅಬಕಾರಿ ಇಲಾಖೆಯ ಕುರಿತು ಆಯವ್ಯಯ ಕುರಿತು ವಿವರಗಳೇನು? | ಕಳೆದ 02 ವರ್ಷಗಳಲ್ಲಿ ಅಬಕಾರಿ ಇಲಾಖೆಗೆ ಒದಗಿಸಲಾದ ಅನುದಾನ, ಮಾಡಿರುವ ವೆಚ್ಚ, ನಿಗದಿಪಡಿಸಿದ ಮತ್ತು ಸಾಧಿಸಲಾದ ಗುರಿಯ ವಿವರಗಳು ಕೆಳಗಿನಂತಿದೆ: |

ರೂ.ಲಕ್ಷಗಳಲ್ಲಿ

| | **2018–19** | | **2019–20** | |
|---|---|---|---|---|
| **ಒದಗಿಸಿದ ಅನುದಾನ ಮತ್ತು ವೆಚ್ಚದ ವಿವರ** | | | | |
| | **ಒದಗಿಸಿದ ಅನುದಾನ** | **ವೆಚ್ಚ** | **ಒದಗಿಸಿದ ಅನುದಾನ** | **ವೆಚ್ಚ** |
| ವೇತನ | 11811.00 | 13412.96 | 14841.38 | 14997.33 |
| ವೇತನೇತರ | 5178.00 | 3884.86 | 5738.01 | 5022.11 |
| **ರಾಜಸ್ವದ ಗುರಿ ಮತ್ತು ಸಾಧನೆಯ ವಿವರ** | | | | |
| | **ಗುರಿ** | **ಸಾಧನೆ** | **ಗುರಿ** | **ಸಾಧನೆ** |
| ರಾಜಸ್ವ | 19,75,000.00 | 17,41656.28 | 20,95,000.00 | 21,58,395.21 |

ಆಇ 51 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

<u>ಕರ್ನಾಟಕ ವಿಧಾನಸಭೆ</u>

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3432 |
| ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ ಕೆ. (ಉಡುಪಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಭಾಗಗಳಲ್ಲಿ ಅಧಿಕ ಸಾಮರ್ಥ್ಯವಿರುವ ಅಥವಾ ಹೆಚ್ಚುವರಿ ಪರಿವರ್ತಕ (ಟ್ರಾನ್ಸ್ ಫಾರ್ಮರ್) ಗಳನ್ನು ಅಳವಡಿಸದೇ ಇರುವುದರಿಂದ ಒತ್ತಡ ಹೆಚ್ಚಾಗಿ ವಿದ್ಯುತ್ ಸಂಪರ್ಕದಲ್ಲಿ ವ್ಯತ್ಯಯವಾಗಿ ಪದೇ ಪದೇ ವಿದ್ಯುತ್ ಕಡಿತಗೊಂಡು ಸಮಸ್ಯೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಗ್ರಾಮೀಣ ಭಾಗದ ರೈತರ ಪಂಪ್‌ಸೆಟ್‌ಗಳಿಗೆ ಮಂಜೂರಾದ ವಿದ್ಯುತ್ ಭಾರಕ್ಕೆ ತಕ್ಕಂತೆ ಪರಿವರ್ತಕಗಳನ್ನು ಅಳವಡಿಸಲಾಗುತ್ತದೆ. ಆದರೆ ರೈತರು ಅಧಿಕ ಸಾಮರ್ಥ್ಯದ ಮೋಟಾರ್ ಪಂಪ್‌ಸೆಟ್‌ಗಳನ್ನು ಅಳವಡಿಸುವುದರಿಂದ ಹಾಗೂ ರೈತರು ನಿಗಮದ ಗಮನಕ್ಕೆ ತರದೆ ಪಂಪ್‌ಸೆಟ್‌ಗಳಿಗೆ ಅನಧಿಕೃತವಾಗಿ ವಿದ್ಯುತ್ ಸಂಪರ್ಕ ಪಡೆಯುವುದರಿಂದ ಪರಿವರ್ತಕಗಳ ಭಾರವು ಹೆಚ್ಚಾಗಿರುತ್ತದೆ.<br><br>ಗ್ರಾಮೀಣ ಭಾಗಗಳಲ್ಲಿ ಹಾಲಿ ಇರುವ ಪರಿವರ್ತಕಗಳ ಮೇಲೆ ಅಧಿಕ ಹೊರೆ ಇದ್ದಲ್ಲಿ ಬಂಡವಾಳ ವೆಚ್ಚ (CAPEX) ಕಾಮಗಾರಿಯಡಿಯಲ್ಲಿ ಅಧಿಕ ಸಾಮರ್ಥ್ಯದ ಪರಿವರ್ತಕ ಅಥವಾ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ.<br><br>ಹಾಲಿ ಇರುವ ಪರಿವರ್ತಕಗಳು ವಿಫಲವಾದ ಸಮಯದಲ್ಲಿ ಅವುಗಳನ್ನು ಬದಲಾಯಿಸುವ ತನಕ ಪರ್ಯಾಯ ಪೂರೈಕೆಯಿಂದ ವಿದ್ಯುತ್ ಸರಬರಾಜು ವ್ಯವಸ್ಥೆ ಮಾಡಲಾಗುತ್ತಿದೆ. ಒತ್ತಡ ಹೆಚ್ಚಾಗಿ ವಿದ್ಯುತ್ ಸಂಪರ್ಕದಲ್ಲಿ ವ್ಯತ್ಯಯವಾಗದಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಕೃಷಿ ಕಾರ್ಯಕ್ಕೆ ಪಂಪುಗಳನ್ನು ಬಳಸುವುದರಿಂದ ಅಧಿಕ ವಿದ್ಯುತ್ತಿನ ಪ್ರಸರಣ ಆಗುವುದರಿಂದ ಹೆಚ್ಚಿನ ಸಾಮರ್ಥ್ಯವಿರುವ ಟ್ರಾನ್ಸ್ ಫಾರ್ಮರ್‌ಗಳನ್ನು ಅಳವಡಿಸುವಲ್ಲಿ ಇಲಾಖೆಯ ನಿಲುವೇನು; | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಕೃಷಿ ಕಾಯಕಕ್ಕೆ ಸಂಬಂಧಿಸಿದಂತೆ, ವಿವಿಧ ಯೋಜನೆಗಳಾದ ಗಂಗಾಕಲ್ಯಾಣ, ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳು, ಹೆಚ್.ವಿ.ಡಿ.ಎಸ್., ಸಾಮಾನ್ಯ ನೀರಾವರಿ ಪಂಪ್‌ಸೆಟ್‌ಗಳ ಅಡಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ. ಅಧಿಕ ಹೊರೆ ಇದ್ದಲ್ಲಿ, ಅಧಿಕ ಸಾಮರ್ಥ್ಯದ ಪರಿವರ್ತಕ ಅಥವಾ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ.<br><br>2020-21ನೇ ಸಾಲಿನಲ್ಲಿ ಫೆಬ್ರವರಿ-2021 ರ ವರೆಗೆ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಗ್ರಾಮೀಣ ಭಾಗಗಳಲ್ಲಿರುವ ಪರಿವರ್ತಕಗಳ ಮೇಲಿರುವ ಒತ್ತಡವನ್ನು ಕಡಿಮೆ ಮಾಡಲು ವಿವಿಧ ಯೋಜನೆಗಳಡಿ ಪರಿವರ್ತಕಗಳನ್ನು ಅಳವಡಿಸಲಾಗಿದ್ದು, ವಿದ್ಯುತ್ ಸರಬರಾಜು ಕಂಪನಿವಾರು ವಿವರಗಳು ಕೆಳಗಿನಂತಿವೆ. |

f. ಸರ್ಕಾರದ ಪೂರ್ವಾನುಮತಿಯೊಂದಿಗೆ ಮಹಾಮಂಡಳದ ವ್ಯಾಪಾರ ವ್ಯವಹಾರವನ್ನು ಮಾಡಿಕೊಂಡು ಹೋಗಲು ಬೇಕಾದ ಚರ ಮತ್ತು ಸ್ಥಿರ ಆಸ್ತಿಯನ್ನು ಭೋಗ್ಯಕ್ಕೆ ಅಥವಾ ಬಾಡಿಗೆಗೆ ಅಥವಾ ಸ್ವಂತಕ್ಕೆ ಪಡೆಯುವುದು ಮತ್ತು ಮಹಾಮಂಡಳದ ವ್ಯಾಪಾರ ವ್ಯವಹಾರಕ್ಕೆ ಅವುಗಳ ಅವಶ್ಯಕತೆ ಇಲ್ಲ ಎನಿಸಿದಾಗ, ಅವುಗಳನ್ನು ಹಿಂದಿರುಗಿಸುವುದು ಅಥವಾ ಮಾರುವುದು.

g. ಸದಸ್ಯ ಸಹಕಾರ ಸಂಘಗಳಿಗೆ ವಿತರಿಸಲು ಸಾಲವನ್ನು ಚೆಕ್/ಡಿಮ್ಯಾಂಡ್ ಡ್ರಾಫ್ಟ್ ಮುಖಾಂತರ ಅಥವಾ ಮೀನುಗಾರಿಕೆ ಬೇಡಿಕೆಗಳ ರೂಪದಲ್ಲಿ ನೀಡುವುದು ಮತ್ತು ನೀಡಿದ ಸಾಲವನ್ನು ವಸೂಲಿ ಮಾಡಲು ಸದಸ್ಯ ಸಂಘಗಳ ಮೇಲೆ ಕ್ರಮ ತೆಗೆದುಕೊಳ್ಳುವುದು.

h. ಮೀನುಗಾರರ ಸಹಕಾರ ಸಂಘಗಳನ್ನು ಸಂಘಟಿಸುವುದು, ಪುನರ್ ಸಂಘಟಿಸುವುದು ಮತ್ತು ಅಭಿವೃದ್ಧಿ ಪಡಿಸುವುದು ಹಾಗೂ ಸದರಿ ಸಂಘಗಳು ಸಮರ್ಪಕವಾಗಿ ಕಾರ್ಯನಿರ್ವಹಿಸದೇ ಇದ್ದಲ್ಲಿ ಅಂತಹ ಸಂಘಗಳ ಆಡಳಿತ ಮಂಡಳಿಯನ್ನು ತೆಗೆದುಹಾಕಿ ಆಡಳಿತಾಧಿಕಾರಿಯನ್ನು ನೇಮಿಸುವಂತೆ ನಿಬಂಧಕರಿಗೆ ಶಿಫಾರಸ್ಸು ಮಾಡುವುದು.

i. ಸದಸ್ಯ ಸಂಘಗಳಿಗೆ ಅವುಗಳ ಆಡಳಿತ ಮತ್ತು ಲೆಕ್ಕಪತ್ರಗಳಿಗೆ ಸಂಬಂಧಿಸಿದಂತೆ ಸೂಕ್ತ ತಿಳಿವಳಿಕೆ ಸಹಾಯ ಮತ್ತು ಮಾರ್ಗದರ್ಶನ ನೀಡುವುದು ಮತ್ತು ಮೇಲ್ವಿಚಾರಣೆ ನಡೆಸುವುದು. ಅವಶ್ಯವೆನಿಸಿದರೆ ಸದಸ್ಯ ಸಂಘಗಳಲ್ಲಿ ಕರ್ತವ್ಯ ನಿರ್ವಹಿಸಲು, ಸದಸ್ಯ ಸಂಘಗಳಿಂದ ಲಿಖಿತ ಮನವಿ ಬಂದರೆ ಮಹಾಮಂಡಳಿಯ ಸಿಬ್ಬಂದಿಯನ್ನು ಎರವಲು ಸೇವೆ ಮೇರೆಗೆ ನೀಡಬಹುದು ಮತ್ತು ಅವಶ್ಯ ಸೇವಾ ಶುಲ್ಕವನ್ನು ನಿಗದಿಪಡಿಸಿ ವಸೂಲಿ ಮಾಡುವುದು.\

j. ಸದಸ್ಯರಿಗೆ ಅವಶ್ಯಕತೆ ಇರುವ ತಾಂತ್ರಿಕ, ಹಣಕಾಸಿನ ಮತ್ತು ಆಡಳಿತ ಸೇವೆ ಅಥವಾ ಸಹಾಯವನ್ನು ಮಾಡುವುದು ಮತ್ತು ಹೊಂದಾಣಿಕೆಯ ವ್ಯವಸ್ಥೆಯಲ್ಲಿ ಪಾಲುಗೊಳ್ಳುವುದು.

k. ಕಾಯಿದೆ ಮತ್ತು ನಿಯಮಗಳಿಗೆ ಒಳಪಟ್ಟ ಮಿತಿಯಲ್ಲಿ ಮಹಾಮಂಡಳದ ನಿಧಿಯನ್ನು ಹೆಚ್ಚಿಸಲು ಸದಸ್ಯ ಸಂಘಗಳಿಂದ ಠೇವಣಿಗಳನ್ನು ಸಂಗ್ರಹಿಸುವುದು ಮತ್ತು ಹಣಕಾಸಿನ ಪರಿಸ್ಥಿತಿಯನ್ನು ಉತ್ತಮಪಡಿಸುವುದು.

l. ಮಹಾಮಂಡಳಿಯ ಲಾಂಛನದಲ್ಲಿ ಅಥವಾ ಹೆಸರಿನಲ್ಲಿ ಮೀನು ಮತ್ತು ಮೀನು ಉತ್ಪನ್ನಗಳನ್ನು ಮಾರಾಟ ಮಾಡುವುದು.

m. ಕಚ್ಚಾ ಅಥವಾ ಸಂಸ್ಕರಿಸಿದ ಪದಾರ್ಥಗಳನ್ನು ಆಮದು ಮತ್ತು ರಫ್ತು ಮಾಡುವ ಕಾರ್ಯ ಕೈಗೊಳ್ಳುವುದು.

n. ಮೀನುಮರಿ ಉತ್ಪಾದನೆ ಹಾಗೂ ಪಾಲನೆಗಾಗಿ ಮೀನುಮರಿ ಉತ್ಪಾದನಾ ಕೇಂದ್ರಗಳನ್ನು ಹೊಂದುವುದು. ಸದಸ್ಯರಿಗೆ ಮೀನು ಸಾಕಲು ಅವಶ್ಯವಿರುವ ಮೀನುಮರಿ, ಮೀನುಗಾರಿಕೆ ಬೇಡಿಕೆಗಳು ಹಾಗೂ ತಾಂತ್ರಿಕ ಸಲಕರಣೆಗಳನ್ನು ಒದಗಿಸುವುದು.

o. ಮಂಜುಗಡ್ಡೆ ಉತ್ಪಾದನಾ ಘಟಕ, ಶೀತಲಗೃಹ ಮೀನು ಸಾಗಾಣಿಕೆ ವಾಹನಗಳು ಹಾಗೂ ಮೀನು ಶೇಖರಣಾ ಕೊಠಡಿಗಳನ್ನು ಹೊಂದುವುದು ಅಥವಾ ಪಡೆಯುವುದು. ಮೀನು ಹಾಗೂ ಮೀನಿನ ಉತ್ಪನ್ನ ನಿರ್ಧರಿಸಿದ ಗುಣಮಟ್ಟದಲ್ಲಿರುವಂತೆ ನೋಡಿಕೊಳ್ಳಲು ಗುಣಮಟ್ಟ ನಿಯಂತ್ರಣ ಸೌಲಭ್ಯಗಳನ್ನು ಹೊಂದುವುದು.

p. ಮೀನುಗಾರಿಕೆ ಬೇಡಿಕೆಗಳು ಇತ್ಯಾದಿಗಳನ್ನು ತಯಾರು ಮಾಡುವುದು.

q. ಮೀನುಗಾರಿಕೆಗೆ ಸಂಬಂಧಪಟ್ಟಂತೆ ಸಂಶೋಧನೆ, ಅಧ್ಯಯನ ಮತ್ತು ಅಭಿವೃದ್ಧಿ ಘಟಕಗಳನ್ನು ಸ್ಥಾಪಿಸುವುದು ಹಾಗೂ ಕಾರ್ಯಕ್ರಮಗಳನ್ನು ನೇರವಾಗಿ ಅಥವಾ ಇತರೇ ಸಂಘಟನೆಗಳ ಮೂಲಕ ಕೈಗೊಳ್ಳುವುದು.

r. ಮೀನುಗಾರರ ಸಹಕಾರ ಸಂಘಗಳ ಪ್ರಯೋಜನಕ್ಕಾಗಿ ಧರ್ಮದತ್ತಿಯನ್ನು ನಿರ್ಮಿಸಿ ಆ ಮೂಲಕ ನಿಧಿಯನ್ನು ಸಂಗ್ರಹಿಸಲು, ಒತ್ತಾಸೆ ಮತ್ತು ಸಹಾಯ ಮಾಡುವುದು.

s. ಮೀನುಗಾರರ ಸಹಕಾರ ಸಂಘಗಳು ಉಳಿತಾಯ ಮಾಡಲು ಪ್ರೋತ್ಸಾಹಿಸುವುದು.

t. ವ್ಯಾಪಾರವನ್ನು ಒಳಗೊಂಡಂತೆ ಸದಸ್ಯರಿಗೆ ಸಹಕಾರ ತತ್ವ, ನೀತಿ, ಯೋಜನೆಗಳ ಬಗ್ಗೆ ತಿಳಿವಳಿಕೆಯನ್ನು ನೀಡಲು ಪ್ರಚಾರ ಕಾರ್ಯಕ್ರಮವನ್ನು ಕೈಗೊಳ್ಳುವುದು.

u. ಮಹಾಮಂಡಳದ ಸ್ಥಿರ ಮತ್ತು ಚರ ಆಸ್ತಿಗೆ ಸಂಭವಿಸಬಹುದಾದ ಹಾನಿಯ ಮೇಲೆ ವಿಮೆಯನ್ನು ಮಾಡುವುದು.

v. ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಸದಸ್ಯ ಮೀನುಗಾರರ ಸಹಕಾರ ಸಂಘಗಳಿಗೆ ಸಾಮಾನ್ಯ ಆರ್ಥಿಕ ಮತ್ತು ಸಾಮಾಜಿಕ ಸೇವೆಯನ್ನು ನೀಡುವುದು.

w. ಮಹಾಮಂಡಳದ ಪದಾಧಿಕಾರಿಗಳಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ, ಸದಸ್ಯ ಸಂಘಗಳಿಗೆ ತರಬೇತಿಯನ್ನು ನೀಡಲು ವ್ಯವಸ್ಥೆ ಮಾಡುವುದು.

x. ಇತರೇ ಸಹಕಾರ ಸಂಸ್ಥೆಗಳಲ್ಲಿ ಪಾಲು ಬಂಡವಾಳ ತೊಡಗಿಸುವುದು.

y. ಅವಶ್ಯವಿದ್ದಕಡೆಗಳಲ್ಲಿ ವಲಯ ಕಛೇರಿ ಮತ್ತು ಮಾರಾಟ ಮಳಿಗೆಗಳನ್ನು ತೆರೆಯುವುದು.

z. ಸರ್ಕಾರದ ಪೂರ್ವಾನುಮತಿಯೊಂದಿಗೆ ಮಹಾಮಂಡಳದ ಯಾವುದೇ ಉದ್ದೇಶಗಳನ್ನು ಈಡೇರಿಸಲು ಪೂರಕವಾದ ಅಥವಾ ಸಾಮಾನ್ಯ ಕಾರ್ಯಕ್ರಮಗಳನ್ನು ಅಗತ್ಯವಿದ್ದಕಡೆ ಕೈಗೆತ್ತಿಕೊಳ್ಳುವುದು.

aa. ಮಹಾಮಂಡಳದ ಕಾರ್ಯಕ್ಷೇತ್ರದಲ್ಲಿ ಅಕ್ವೇರಿಯಂಗಳನ್ನು ಸ್ಥಾಪಿಸಿ ನಿರ್ವಹಿಸುವುದು ಹಾಗೂ ಗುತ್ತಿಗೆಗೆ ನೀಡುವುದು.

4) ಮಹಾಮಂಡಳದ ಹಾಗೂ ಸದಸ್ಯ ಮೀನುಗಾರರ ಸಹಕಾರ ಸಂಘಗಳ ಏಳಿಗೆಗಾಗಿ ಕೇಂದ್ರ/ರಾಜ್ಯ ಸರ್ಕಾರದ, ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ, ರಾಷ್ಟ್ರೀಯ ಮೀನುಗಾರಿಕೆ ಅಭಿವೃದ್ಧಿ ಮಂಡಳಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು.



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | :: | 3233 |
| ಸದಸ್ಯರ ಹೆಸರು | :: | ಶ್ರೀ ವೆಂಕಟರಾವ್ ನಾಡಗೌಡ(ಸಿಂಧನೂರು) |
| ಉತ್ತರಿಸುವ ದಿನಾಂಕ | :: | 22.03.2021 |
| ಉತ್ತರಿಸುವ ಸಚಿವರು | :: | ಪಶುಸಂಗೋಪನೆ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿರುವ ಡಿಪ್ಲೋಮಾ ಪಶುಸಂಗೋಪನಾ ಕಾಲೇಜುಗಳ ಸಂಖ್ಯೆ ಎಷ್ಟು; ಅವುಗಳು ಯಾವುವು; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಒಟ್ಟು 05 ಡಿಪ್ಲೋಮಾ ಪಶುಸಂಗೋಪನಾ ಕಾಲೇಜುಗಳಿದ್ದು ಅವುಗಳ ವಿವರ ಈ ಕೆಳಗಿನಂತಿರುತ್ತವೆ.<br>1. ಪಶುಸಂಗೋಪನಾ ಡಿಪ್ಲೋಮಾ ಕಾಲೇಜು ಶಿಗ್ಗಾವ, ಹಾವೇರಿ ಜಿಲ್ಲೆ<br>2. ಪಶುಸಂಗೋಪನಾ ಡಿಪ್ಲೋಮಾ ಕಾಲೇಜು ಕೊನೆಹಳ್ಳಿ, ತಿಪಟೂರು, ತುಮಕೂರು ಜಿಲ್ಲೆ<br>3. ಪಶುಸಂಗೋಪನಾ ಡಿಪ್ಲೋಮಾ ಕಾಲೇಜು ಡೊರನಳ್ಳಿ, ಯಾದಗಿರಿ ಜಿಲ್ಲೆ<br>4. ಪಶುಸಂಗೋಪನಾ ಡಿಪ್ಲೋಮಾ ಕಾಲೇಜು ಬರ್ಗಿ, ಚಾಮರಾಜನಗರ ಜಿಲ್ಲೆ.<br>5. ಪಶುಸಂಗೋಪನಾ ಡಿಪ್ಲೋಮಾ ಕಾಲೇಜು, ಹಾಸನ. |
| ಆ) | ಈ ಕಾಲೇಜುಗಳನ್ನು ಯಾವಾಗ ಪ್ರಾರಂಭಿಸಲಾಯಿತು ಮತ್ತು ಈ ಕಾಲೇಜುಗಳಲ್ಲಿ ತೇರ್ಗಡೆ ಹೊಂದಿರುವ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; (ಕಳೆದ ಮೂರು ವರ್ಷಗಳ ಕಾಲೇಜುವಾರು ಮಾಹಿತಿ ನೀಡುವುದು) | ಪಶುಸಂಗೋಪನಾ ಡಿಪ್ಲೋಮಾ ಕಾಲೇಜುಗಳ ವಿವರ |

ಪಶುಸಂಗೋಪನಾ ಡಿಪ್ಲೋಮಾ ಕಾಲೇಜುಗಳ ವಿವರ

| ಕ್ರ ಸಂ. | ಕಾಲೇಜು | ಸ್ಥಾಪನೆ ವರ್ಷ | ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|
| | | | 2017-18 | 2018-19 | 2019-20 |
| 1 | ಶಿಗ್ಗಾವ, ಹಾವೇರಿ ಜಿ: | 2012 | 34 | 52 | 41 |
| 2 | ಕೊನೆಹಳ್ಳಿ,ತುಮಕೂರು ಜಿ: | 2011 | 45 | 40 | 45 |
| 3 | ಡೋರನಳ್ಳಿ, ಯಾದಗಿರಿ ಜಿ: | 2017 | - | 51 | 42 |
| 4 | ಬರ್ಗಿ,ಚಾಮರಾಜನಗರ ಜಿ: | 2017 | - | 38 | 41 |
| 5 | ಕೋರವಂಗಲ, ಹಾಸನ ಜಿ: | 2017 | - | 45 | 43 |

<table>
<tr>
<td>ಇ)</td>
<td>ಈ ಅಭ್ಯರ್ಥಿಗಳು ಪಶುವೈದ್ಯಕೀಯ ಮತ್ತು ಪಶು ಸಂಗೋಪನೆಗೆ ಸಂಬಂಧಿಸಿದ ಎಲ್ಲಾ ತರಬೇತಿಗಳನ್ನು ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td>
<td>ಪಶುವೈದ್ಯಕೀಯ ಮತ್ತು ಪಶುಸಂಗೋಪನೆಗೆ ಸಂಬಂಧಿಸಿದ ಪಶು ಪಾಲನಾ ಪದ್ಧತಿಗಳ ಬಗ್ಗೆ ಅಭ್ಯರ್ಥಿಗಳಿಗೆ ತರಬೇತಿ ನೀಡಲಾಗುತ್ತಿದ್ದು, ಇದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.</td>
</tr>
<tr>
<td>ಈ)</td>
<td>ಪಶುಸಂಗೋಪನೆ ಮತ್ತು ಪಶುವೈದ್ಯಕೀಯ ಇಲಾಖೆಯಲ್ಲಿ ಸುಮಾರು ವರ್ಷಗಳಿಂದ ಪಶುವೈದ್ಯಕೀಯ ಸಹಾಯಕರ ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಅಭ್ಯರ್ಥಿಗಳನ್ನು ಪಶುವೈದ್ಯಕೀಯ ಸಹಾಯಕರ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದೇ;</td>
<td rowspan="2">ಪಶುವೈದ್ಯಕೀಯ ಸಹಾಯಕರ ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>
<table>
<tr><th>ಕ್ರ.ಸಂ</th><th>ವೃಂದ</th><th>ಮಂಜೂರು</th><th>ಭರ್ತಿ</th><th>ಖಾಲಿ</th></tr>
<tr><td>1)</td><td>ಪಶುವೈದ್ಯಕೀಯ ಸಹಾಯಕರು</td><td>2144</td><td>1196</td><td>948</td></tr>
</table>
<br>ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ಆರ್ಥಿಕ ಮಿತವ್ಯಯ ಸಾಧಿಸುವ ನಿಟ್ಟಿನಲ್ಲಿ ಆರ್ಥಿಕ ಇಲಾಖೆಯ ಸುತ್ತೋಲೆ ದಿನಾಂಕ: 06.07.2020 ರನ್ವಯ ನೇರ ನೇಮಕಾತಿ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲಾಗಿರುತ್ತದೆ.<br><br>
ಆರ್ಥಿಕ ಇಲಾಖೆಯಿಂದ ಅನುಮತಿ ದೊರೆತ ಕೂಡಲೇ ಆದ್ಯತೆ ಮೇಲೆ ಪಶುವೈದ್ಯಕೀಯ ಸಹಾಯಕರ ಖಾಲಿ ಹುದ್ದೆಗಳನ್ನು ತುಂಬಲು ಅಗತ್ಯ ಕ್ರಮ ವಹಿಸಲಾಗುವುದು.<br><br>
ಕಲ್ಯಾಣ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ 83 ಹುದ್ದೆಗಳನ್ನು ಭರ್ತಿ ಮಾಡಲು ಅಂತಿಮ ಅಧಿಸೂಚನೆ ಹೊರಡಿಸಲಾಗಿದ್ದು ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ಆರ್ಥಿಕ ಮಿತವ್ಯಯ ಸಾಧಿಸುವ ನಿಟ್ಟಿನಲ್ಲಿ ನೇರ ನೇಮಕಾತಿ ಪ್ರಕ್ರಿಯೆಯು ಸ್ಥಗಿತಗೊಳಿಸಲಾಗಿತ್ತು ಮುಂದುವರೆದು ಸರ್ಕಾರದ ಪತ್ರದ ಸಂಖ್ಯೆ ಪಸಂಮೀ ಇ-28 ಪಅವಿ 2020 ದಿನಾಂಕ: 02-03-2021 ರಂತೆ 83 ಪಶುವೈದ್ಯಕೀಯ ಸಹಾಯರ ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ನೀಡಲಾಗಿದೆ.</td>
</tr>
<tr>
<td>ಉ)</td>
<td>ಹಾಗಿದ್ದಲ್ಲಿ, ನೇಮಕಾತಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಸರ್ಕಾರ ಕರಡು ಪ್ರಸ್ತಾವನೆ ಏನಾದರೂ ಸಿದ್ಧಪಡಿಸಿದೆಯೇ;</td>
</tr>
</table>

| | | |
|---|---|---|
| ಊ) | ಈ ಅಭ್ಯರ್ಥಿಗಳನ್ನು ಪಶುವೈದ್ಯಕೀಯ ಸಹಾಯಕರ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳಲು ಸರ್ಕಾರಕ್ಕೆ ಇರುವ ತೊಂದರೆಗಳೇನು? (ವಿವರ ನೀಡುವುದು) | ಇಲಾಖಾ ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಪಶುವೈದ್ಯಕೀಯ ಸಹಾಯಕರ ಹುದ್ದೆಗಳು ಶೇಕಡಾ 75 ರಷ್ಟು ನೇಮಕಾತಿ ಹುದ್ದೆಗಳಾಗಿದ್ದು ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ಆರ್ಥಿಕ ಮಿತವ್ಯಯ ಸಾಧಿಸುವ ನಿಟ್ಟಿನಲ್ಲಿ ನೇರ ನೇಮಕಾತಿ ಪ್ರಕ್ರಿಯೆಯು ಸ್ಥಗಿತಗೊಂಡಿರುತ್ತದೆ.<br>ಆರ್ಥಿಕ ಇಲಾಖೆಯಿಂದ ಅನುಮತಿ ದೊರೆತ ಕೂಡಲೇ ಆದ್ಯತೆ ಮೇಲೆ ಪಶುವೈದ್ಯಕೀಯ ಸಹಾಯಕರ ಖಾಲಿ ಹುದ್ದೆಗಳನ್ನು ತುಂಬಲು ಅಗತ್ಯ ಕ್ರಮ ವಹಿಸಲಾಗುವುದು. |

ಸಂಖ್ಯೆ: ಪಸಂಮೀ ಇ-57 ಪಅಸೇ 2021

**(ಪ್ರಭು ಬಿ. ಚವ್ಹಾಣ್)**
ಪಶುಸಂಗೋಪನೆ ಸಚಿವರು

<u>ಕರ್ನಾಟಕ ವಿಧಾನಸಭೆ</u>

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3234

2. ಸದಸ್ಯರ ಹೆಸರು : ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ)

3. ಉತ್ತರಿಸುವ ದಿನಾಂಕ : 22.03.2021

4. ಉತ್ತರಿಸುವ ಸಚಿವರು : ಕಂದಾಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಶಾಲಾ ಭೂದಾನ ಜಮೀನುಗಳನ್ನು ವಾರ್ಷಿಕ ಗೇಣಿ/ಗುತ್ತಿಗೆ ಆಧಾರದಲ್ಲಿ ಸಾಗುವಳಿ ಮಾಡಲು ರೈತರಿಗೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುಬಂಧ-1ರಲ್ಲಿ ಲಗತ್ತಿಸಿದೆ. |
| (ಆ) | ಬಂದಿದ್ದಲ್ಲಿ ಎಷ್ಟು ವರ್ಷಗಳಿಂದ ಈ ವ್ಯವಸ್ಥೆ ಜಾರಿಯಲ್ಲಿದೆ ಮತ್ತು ಇದರಿಂದ ಶಾಲೆಗಳಿಗೆ ನಿಯಮಿತವಾಗಿ ಆದಾಯ ಬರುತ್ತಿರುವುದನ್ನು ಸರ್ಕಾರ ಖಾತ್ರಿಪಡಿಸಿಕೊಂಡಿದೆಯೇ; | ಗೇಣಿದಾರರು ಕಳೆದ 40 ರಿಂದ 50 ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದಾರೆ. ಸದರಿ ಗೇಣಿ ಸಾಗುವಳಿದಾರರಿಂದ ಶಾಲೆಗಳಿಗೆ ಯಾವುದೇ ಆದಾಯ ಬರುತ್ತಿರುವುದಿಲ್ಲ. |
| (ಇ) | ಈ ಜಮೀನನ್ನು ರೈತರಿಗೆ ಗೇಣಿ ಆಧಾರದಲ್ಲಿ ನೀಡಿರುವುದರಿಂದ ಶಾಲಾ ಶೈಕ್ಷಣಿಕ ಚಟುವಟಿಕೆ ಹಾಗೂ ಆಟದ ಮೈದಾನ ಇತ್ಯಾದಿಗಳಿಗೆ ಜಮೀನು ಕೊರತೆಯುಂಟಾಗಿ ತೊಂದರೆ ಆಗುತ್ತಿದೆಯೇ; (ವಿವರ ನೀಡುವುದು) | ಈ ಕುರಿತು ಯಾವುದೇ ದೂರುಗಳು ಬಂದಿರುವುದಿಲ್ಲ. |
| (ಈ) | ಕಳೆದ 4-5 ದಶಕಗಳಿಂದ ಗೇಣಿ ಆಧಾರದಲ್ಲಿ ವ್ಯವಸಾಯ ಮಾಡುತ್ತಿರುವ ರೈತರುಗಳಿಗೆ 1974ರ ಭೂ ಸುಧಾರಣಾ ಕಾಯ್ದೆಯನ್ವಯ ಸೂಕ್ತ ಪರಿಹಾರವನ್ನು ಅವರಿಂದ ಭರಿಸಿಕೊಂಡು ಈ ಜಮೀನಿನ ಹಕ್ಕುಪತ್ರವನ್ನು ಅವರಿಗೆ ನೀಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಇಂತಹ ಯಾವುದೇ ಪ್ರಸ್ತಾವನೆ ಇರುವುದಿಲ್ಲ |

ಸಂಖ್ಯೆ: ಆರ್‌ಡಿ 09 ಎಲ್‌ಆರ್‌ಎಸ್ 2021

(ಆರ್.ಅಶೋಕ)
ಮಾನ್ಯ ಕಂದಾಯ ಸಚಿವರು.

## ಅನುಬಂಧ-1

**ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕಿನ ವಿದ್ಯಾದಾನ ಮತ್ತು ಭೂದಾನ ಜಮೀನುಗಳ ವಿವರ ಈ ಕೆಳಗಿನಂತಿರುತ್ತದೆ:-**

| ಕ್ರಮ ಸಂಖ್ಯೆ | ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|---|
| 1 | ಯೋಗಿನರಸಿಪುರ | 99 | 16-23 |
| 2 | ಗೇರುವಳ್ಳಿ | 35/2 | 4-00 |
| 3 | ಲಕ್ಕುಂದ | 2/3 | 0-13 |
| 4 | ಅರಳಾಪುರ | 2 | 5-14 |
| 5 | ಕುಡುಮಲ್ಲಿಗೆ | 126 | 0-10 |
| 6 | ನ್ಯಾಯದವಳ್ಳಿ | 75/2 | 0-11 |
| 7 | ಕೂಡಿಗೆ | 121 | 2-00 |
| 8 | ತಳಲೆ | 10/2ಬಿ | 0-20 |
| 9 | ತಳಲೆ | 18/1 | 1-00 |
| 10 | ಜಂಬುವಳ್ಳಿ | 34/3 | 0-20 |
| 11 | ಬೇಗುವಳ್ಳಿ | 156 | 1-23 |
| 12 | ಸಿಂಧುವಾಡಿ | 46 | 2-00 |
| 13 | ಹೊಸಬೀಡು | 71 | 1-00 |
| 14 | ಹಣಗೆರೆ | 1 | 2-10 |
| 15 | ಹತ್ತಿಗದ್ದೆ | 21 | 1-00 |
| 16 | ಕಾವೇರಿ | 91 | 1-06 |
| 17 | ಕಾವೇರಿ | 93/2 | 1-00 |
| 18 | ಕುಚ್ಚಲು | 13 | 1-00 |
| 19 | ಯೋಗಿಮಳಲಿ | 48/1 | 1-00 |
| 20 | ಯೋಗಿಮಳಲಿ | 48/3 | 1-00 |
| 21 | ತ್ರಿಯಂಬಕಪುರ | 173 | 2-00 |
| 22 | ಕೋಣಂದೂರು | 117 | 4-00 |
| 23 | ಕೋಣಂದೂರು | 190/4 | 4-00 |
| 24 | ಕೋಣಂದೂರು | 266/2 | 4-00 |
| 25 | ಕೆಸರೆ | 65/2 | 1-20 |
| 26 | ಜಂಬೆತಲ್ಲೂರು | 196 | 4-00 |
| 27 | ಶಿರಿಗಾರು | 203/1 | 2-00 |
| 28 | ಕಾಸರವಳ್ಳಿ | 61/2 | 0-14 |
| 29 | ನಂಟೂರು | 8 | 0-33 |
| 30 | ದಾಸನಕೊಡಿಗೆ | 82 | 1-10 |

| | | | |
|---|---|---|---|
| 31 | ಬಗ್ಗೋಡಿಗೆ | 25/4 | 0.13 |
| 32 | ಬಿಳುಮನೆ | 88 | 3–01 |
| 33 | ಶಿವಳ್ಳಿ | 70 | 1–25 |
| 34 | ಬಂಡಿಗಡಿ | 29 | 2–00 |
| 35 | ಹೊಸ ಅಗ್ರಹಾರ | 2 | 0–14 |
| 36 | ಹೊಸ ಅಗ್ರಹಾರ | 3 | 0–38 |
| 37 | ನಂಬಳ | 105 | 1–00 |
| 38 | ದೇವಂಗಿ | 89 | 5–00 |
| | ಒಟ್ಟು ವಿಸ್ತೀರ್ಣ | | **81–38** |

* * *

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3342
2. ಸದಸ್ಯರ ಹೆಸರು : ಶ್ರೀ ರಾಮಲಿಂಗಾ ರೆಡ್ಡಿ (ಬಿ.ಟಿ.ಎಂ. ಲೇಔಟ್)
3. ಉತ್ತರಿಸಬೇಕಾದ ದಿನಾಂಕ : 23-03-2021
4. ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನಮ್ಮ ಮೆಟ್ರೋ ರೈಲು 2ನೇ ಹಂತದ ಯೋಜನೆಯಲ್ಲಿ ಕೈಗೊಂಡಿರುವ ವಿವಿಧ ಕಾಮಗಾರಿಗಳ ಪ್ರಗತಿ ಯಾವ ಹಂತದಲ್ಲಿದೆ; (ವಿವರ ನೀಡುವುದು) | ನಮ್ಮ ಮೆಟ್ರೋ ರೈಲು 2ನೇ ಹಂತದ ಯೋಜನೆಯಲ್ಲಿ ಕೈಗೊಂಡಿರುವ ವಿವಿಧ ಕಾಮಗಾರಿಗಳ ಪ್ರಗತಿಯನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ. |
| ಆ) | ಈ 2ನೇ ಹಂತದ ಯೋಜನೆಗೆ ಇಲ್ಲಿಯವರೆಗೆ ಖರ್ಚು ಮಾಡಿರುವ ಹಣವೆಷ್ಟು; | 2ನೇ ಹಂತದ ಯೋಜನೆಗೆ ಫೆಬ್ರವರಿ 2021ರ ಅಂತ್ಯದವರೆಗೆ ರೂ.16,350 ಕೋಟಿಗಳಷ್ಟು ಖರ್ಚಾಗಿರುತ್ತದೆ. |
| ಇ) | ಈ ಯೋಜನೆಯು ಯಾವಾಗ ಪೂರ್ಣಗೊಳ್ಳಬೇಕಾಗಿತ್ತು; | ಈ ಯೋಜನೆಯು ಮಾರ್ಚ್-2021ರ ವೇಳೆಗೆ ಪೂರ್ಣಗೊಳ್ಳಬೇಕಾಗಿತ್ತು. |
| ಈ) | ಈ ಯೋಜನೆಯು ಯಾವಾಗ ಪೂರ್ಣಗೊಳ್ಳುವ ಸಾಧ್ಯತೆಗಳಿವೆ; | ಈ ಯೋಜನೆಯನ್ನು ಪೂರ್ಣಗೊಳ್ಳುವ ವಿವರವನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಉ) | ಈ ವಿಳಂಬಕ್ಕೆಕಾರಣಗಳೇನು? | **ಈ ವಿಳಂಬಕ್ಕೆ ಕಾರಣಗಳು ಕೆಳಕಂಡಂತಿದೆ:**<br>1. ಭೂಸ್ವಾಧೀನ ಪ್ರಕ್ರಿಯೆಯಿಂದಾಗಿ ವಿಳಂಬವಾಗಿರುತ್ತದೆ.<br>2. ಮರಗಳನ್ನು ತೆರವುಗೊಳಿಸಲು ಸಾರ್ವಜನಿಕರಿಂದ ಬಂದ ಆಕ್ಷೇಪಣೆಗಳ ಹಿನ್ನಲೆಯಲ್ಲಿ ನ್ಯಾಯಾಲಯದ ಆದೇಶದ ಪ್ರಕಾರ ಮರಗಳನ್ನು ತೆರವುಗೊಳಿಸುವ ಕಾರ್ಯಾಚರಣೆಯು ಸ್ಥಗಿತಗೊಂಡಿತ್ತು.<br>3. ಸುರಂಗ ಮಾರ್ಗದ ಕಾಮಗಾರಿಗಳ ಟೆಂಡರ್‌ಗಳಲ್ಲಿ ಹೆಚ್ಚುದರಗಳನ್ನು ನಮೂದಿಸಿದ್ದುದರಿಂದ ಮರು ಟೆಂಡರ್ ಕರೆದಿದ್ದರಿಂದ ವಿಳಂಬವಾಗಿರುತ್ತದೆ.<br>4. ಕೋವಿಡ್-19 ಮಹಾಮಾರಿ ಸಾಂಕ್ರಾಮಿಕ ರೋಗ ಹರಡುವಿಕೆಯಿಂದಾಗಿ ಕಾಮಗಾರಿಗಳು ಸ್ಥಗಿತಗೊಂಡಿದ್ದವು. |

ಕಡತ ಸಂಖ್ಯೆ: ನಅಇ 80 ಪಿ.ಆರ್.ಜೆ 2021

**(ಬಿ.ಎಸ್.ಯಡಿಯೂರಪ್ಪ)**
ಮುಖ್ಯಮಂತ್ರಿಗಳು

ಅನುಬಂಧ-1

# ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ

## ಬೆಂಗಳೂರು ಮೆಟ್ರೋ ರೈಲು ಯೋಜನೆ ಹಂತ-2ರ ಪ್ರಗತಿಯ ವಿವರಗಳು

**ಪ್ರಗತಿಯ ಭೌತಿಕ ವಿವರಗಳು ಈ ಕೆಳಕಂಡಂತಿವೆ:**

- **ರೀಚ್-1ರ ವಿಸ್ತರಣೆ:** ಬೈಯ್ಯಪ್ಪನಹಳ್ಳಿಯಿಂದ ವೈಟ್‌ಫೀಲ್ಡ್‌ವರೆಗೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಶೇ. 82%ರಷ್ಟು ಕಾಮಗಾರಿ ಮುಕ್ತಾಯಗೊಂಡಿದೆ.
- **ರೀಚ್-2ರ ವಿಸ್ತರಣೆ:** ಮೈಸೂರುರಸ್ತೆಯಿಂದ ಕೆಂಗೇರಿವರೆಗೆ ಕಾಮಗಾರಿಯು ಮುಕ್ತಾಯ ಹಂತದಲ್ಲಿದ್ದು, ಶೇ. 91%ರಷ್ಟು ಕಾಮಗಾರಿ ಮುಕ್ತಾಯಗೊಂಡಿದೆ.
- **ರೀಚ್-3 ವಿಸ್ತರಣೆ:** ನಾಗಸಂದ್ರದಿಂದ ಬಿ.ಐ.ಇ.ಸಿ.ವರೆಗೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಶೇ. 65%ರಷ್ಟು ಕಾಮಗಾರಿ ಮುಕ್ತಾಯಗೊಂಡಿದೆ.
- **ರೀಚ್-4 ವಿಸ್ತರಣೆ:** ಯಲಚೇನಹಳ್ಳಿಯಿಂದ ಅಂಜನಾಪುರ ಟೌನ್‌ಶಿಪ್‌ವರೆಗೆ ಕಾಮಗಾರಿಯು ಮುಕ್ತಾಯಗೊಂಡು ದಿನಾಂಕ: 14.01.2021ರಿಂದ ಸಾರ್ವಜನಿಕರ ಸೇವೆಗೆ ಮುಕ್ತಗೊಳಿಸಲಾಗಿದೆ.
- **ರೀಚ್-5 ಹೊಸ ಮಾರ್ಗ:** ಆರ್.ವಿ. ರಸ್ತೆಯಿಂದ ಬೊಮ್ಮಸಂದ್ರವರೆಗೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಶೇ. 80%ರಷ್ಟು ಕಾಮಗಾರಿ ಮುಕ್ತಾಯಗೊಂಡಿದೆ.
- **ರೀಚ್-6:** ಗೊಟ್ಟಿಗೆರೆಯಿಂದ ಡೈರಿಸರ್ಕಲ್‌ವರೆಗೆ (ಎಲಿವೇಟೆಡ್) ಕಾಮಗಾರಿಯು ಪ್ರಗತಿಯಲ್ಲಿದ್ದು, ಶೇ. 36%ರಷ್ಟು ಕಾಮಗಾರಿ ಮುಕ್ತಾಯಗೊಂಡಿದೆ.
- **ರೀಚ್-6:** ಡೈರಿ ಸರ್ಕಲ್‌ನಿಂದ ನಾಗವಾರದವರೆಗೆ (ಸುರಂಗಮಾರ್ಗ) ಕಾಮಗಾರಿಯು ಪ್ರಗತಿಯಲ್ಲಿದ್ದು, ಶೇ. 13%ರಷ್ಟು ಕಾಮಗಾರಿ ಮುಕ್ತಾಯಗೊಂಡಿದೆ.

**ಅನುಬಂಧ-2**

## ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ

**ಬೆಂಗಳೂರು ಮೆಟ್ರೋ ರೈಲು ಯೋಜನೆ ಹಂತ-2ರ ಮುಕ್ತಾಯಗೊಳಿಸುವ ವಿವರಗಳು:**

- ಬೆಂಗಳೂರು ಮೆಟ್ರೋ ರೈಲು ಯೋಜನೆ ಹಂತ-2ರಲ್ಲಿ 72.10 ಕಿ.ಮೀ.ಗಳ ಉದ್ದವಿದ್ದು, ದಕ್ಷಿಣ ವಿಸ್ತರಣೆ: ಯಲಚೇನಹಳ್ಳಿಯಿಂದ ಸಿಲ್ಕ್ ಸಂಸ್ಥೆಯವರೆಗೆ 6.3 ಕಿ.ಮೀ.ಗಳ ಉದ್ದದ ಮೆಟ್ರೋ ಮಾರ್ಗವನ್ನು ದಿನಾಂಕ: 14.01.2021ರಂದು ಸಾರ್ವಜನಿಕರ ಸೇವೆಗೆ ಮುಕ್ತಗೊಳಿಸಲಾಯಿತು.
- ಪಶ್ಚಿಮ ವಿಸ್ತರಣೆ: ಮೈಸೂರು ರಸ್ತೆಯಿಂದ ಕೆಂಗೇರಿಯವರೆಗೆ 7.5 ಕಿ.ಮೀ.ಗಳ ಉದ್ದದ ಮಾರ್ಗವನ್ನು ಜೂನ್-2021ರ ವೇಳೆಗೆ ಪೂರ್ಣಗೊಳಸಲು ಯೋಜಿಸಲಾಗಿದೆ.
- ಪೂರ್ವ ವಿಸ್ತರಣೆ, ಉತ್ತರ ವಿಸ್ತರಣೆ ಹಾಗೂ ಹೊಸ ಮಾರ್ಗಗಳನ್ನು ಒಳಗೊಂಡ 51 ಕಿ.ಮೀ.ಗಳ ಉದ್ದದ ಮಾರ್ಗವನ್ನು ಡಿಸೆಂಬರ್-2022ರ ವೇಳೆಗೆ ಪೂರ್ಣಗೊಳಿಸಲು ಯೋಜಿಸಲಾಗಿದೆ.
- ರೀಚ್-6 ಎತ್ತರಿಸಿದ ಮಾರ್ಗ: ಕಾಳೇನ ಅಗ್ರಹಾರದಿಂದ ತಾವರೆಕೆರೆವರೆಗೆ 7.5 ಕಿ.ಮೀ.ಗಳ ಉದ್ದದ ಮಾರ್ಗವನ್ನು ಡಿಸೆಂಬರ್-2023ರ ವೇಳೆಗೆ ಪೂರ್ಣಗೊಳಿಸಲು ಯೋಜಿಸಲಾಗಿದೆ.
- ರೀಚ್-6 ಸುರಂಗಮಾರ್ಗ: ತಾವರೆಕೆರೆಯಿಂದ ನಾಗವಾರದವರೆಗೆ 13.8 ಕಿ.ಮೀ.ಗಳ ಉದ್ದದ ಮಾರ್ಗವನ್ನು ಮಾರ್ಚ್-2025ರ ವೇಳೆಗೆ ಪೂರ್ಣಗೊಳಿಸಲು ಯೋಜಿಸಲಾಗಿದೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 3247 |
| 2) | **ಸದಸ್ಯರ ಹೆಸರು** | ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ) |
| 3) | **ಉತ್ತರಿಸಬೇಕಾದ ದಿನಾಂಕ** | 22-03-2021 |
| 4) | **ಉತ್ತರಿಸಬೇಕಾದ ಸಚಿವರು** | ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯ ಮೀನುಗಾರಿಕೆ ಕಛೇರಿಯಲ್ಲಿ ಕೊರತೆಯಿರುವ ಸಿಬ್ಬಂದಿಗಳ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಮೀನುಗಾರಿಕೆ ಕಛೇರಿಯಲ್ಲಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಪ್ರಸ್ತುತ ಇರುವ ಆರ್ಥಿಕ ನಿರ್ಬಂಧನೆಗಳ ಹಿನ್ನೆಲೆಯಲ್ಲಿ, ಮೀನುಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಸ್ತಾವನೆಯನ್ನು 02 ವರ್ಷಗಳ ಕಾಲ ಮುಂದೂಡಲಾಗಿದೆ. |
| ಇ) | ಪ್ರಸ್ತುತ 2019 ರಿಂದ 2020ನೇ ಸಾಲಿನ ವರೆಗೆ ಮೀನುಗಾರಿಕೆ ಕಛೇರಿಗೆ ಭರ್ತಿ ಮಾಡಿರುವ ಹುದ್ದೆಗಳೆಷ್ಟು; ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವ ಹುದ್ದೆ ಗಳೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | **2019 ರಿಂದ 2020ನೇ ಸಾಲಿನವರೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೀನುಗಾರಿಕೆ ಕಛೇರಿಗಳಲ್ಲಿ ಭರ್ತಿ ಮಾಡಲಾದ ಹುದ್ದೆಗಳ ವಿವರ ಈ ಕೆಳಗಿನಂತಿದೆ.**<br>1 ) ಮೀನುಗಾರಿಕೆ ಹಿರಿಯ ಉಪ ನಿರ್ದೇಶಕರು, ಮಂಗಳೂರು.<br>2) ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ), ಮೀನುಗಾರಿಕೆ ಉಪನಿರ್ದೇಶಕರ ಕಛೇರಿ, ಮಂಗಳೂರು<br>3) ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ದೋಣಿ ಮತ್ತು ಸಲಕರಣೆ) ಮಂಗಳೂರು<br>4) ಮೀನುಗಾರಿಕೆ ಮೇಲ್ವಿಚಾರಕರು, ಮೀನುಗಾರಿಕೆ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು (ರಾಜ್ಯ ವಲಯ)<br>**ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವ ಹುದ್ದೆಗಳ ಸಂಖ್ಯೆ 3: ವಿವರ ಈ ಕೆಳಗಿನಂತಿದೆ:-**<br>1) ಡಾಟಾ ಎಂಟ್ರಿ ಆಪರೇಟರ್-1<br>2) ಗ್ರೂಪ್-ಡಿ - 2 |
| ಈ) | ಈ ಜಿಲ್ಲೆಯ ಮೀನುಗಾರಿಕೆ ಕಛೇರಿಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ಗಳು, ಅಧಿಕಾರಿಗಳು ಹಾಗೂ ಹೊರಗುತ್ತಿಗೆ ನೌಕರರ ಮಾಹಿತಿ ನೀಡುವುದು? (ಹುದ್ದೆವಾರು ಸಂಪೂರ್ಣ ಮಾಹಿತಿ ನೀಡುವುದು) | ಮೀನುಗಾರಿಕೆ ಕಛೇರಿಯಲ್ಲಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳು, ಅಧಿಕಾರಿಗಳು ಹಾಗೂ ಹೊರಗುತ್ತಿಗೆ ನೌಕರರ ಮಾಹಿತಿಯನ್ನು ಕ್ರಮವಾಗಿ **<u>ಅನುಬಂಧ-1 ಮತ್ತು 2</u>** ರಲ್ಲಿ ನೀಡಲಾಗಿದೆ. |

**ಸಂಖ್ಯೆ: ಪಸಂಮೀ ಇ-111 ಮೀಇಯೋ 2021**

(ಎಸ್ ಅಂಗಾರ)
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

**ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3247 ರ**

## ಅನುಬಂಧ-1

**ಮಂಗಳೂರು ವಲಯದಲ್ಲಿ ರಾಜ್ಯ ವಲಯ ಹಾಗೂ ಜಿಲ್ಲಾ ವಲಯದ ಕಛೇರಿಗಳಿಗೆ ಮಂಜೂರಾಗಿರುವ ಹುದ್ದೆಗಳ ವಿವರ -**

ಇಲಾಖೆ: ಮೀನುಗಾರಿಕೆ ಜಿಲ್ಲೆ: ದಕ್ಷಿಣ ಕನ್ನಡ

| ಕ್ರ ಸಂ | ಕಚೇರಿಯ ಹೆಸರು | ಪದನಾಮ | ವೃಂದ | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|---|---|---|
| 1 | ಮೀನುಗಾರಿಕೆ ಹಿರಿಯ ಉಪನಿರ್ದೇಶಕರು, ಮಂಗಳೂರು ಕಛೇರಿ (ರಾಜ್ಯ ವಲಯ) | ಮೀನುಗಾರಿಕೆ ಹಿರಿಯ ಉಪನಿರ್ದೇಶಕರು | ಎ | 1 | 0 | 1 |
| 2 | | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) | ಬಿ | 1 | 1 | 0 |
| 3 | | ಮೀನುಗಾರಿಕೆ ಸಹಾಯಕ ನಿರ್ದೇಶಕರು | ಬಿ | 1 | 1 | 0 |
| 4 | | ಪ್ರಥಮ ದರ್ಜೆ ಸಹಾಯಕರು | ಸಿ | 2 | 2 | 0 |
| 5 | | ದ್ವಿತೀಯ ದರ್ಜೆ ಸಹಾಯಕರು | ಸಿ | 3 | 0 | 3 |
| 6 | | ಶೀಘ್ರಲಿಪಿಗಾರರು | ಸಿ | 1 | 0 | 1 |
| 7 | | ಬೆರಳಚ್ಚುಗಾರರು | ಸಿ | 1 | 1 | 0 |
| 8 | | ವಾಹನ ಚಾಲಕರು | ಸಿ | 1 | 0 | 1 |
| 9 | | ಜವಾನ | ಡಿ | 1 | 0 | 1 |
| 10 | | ಕಾವಲುಗಾರ | ಡಿ | 1 | 1 | 0 |
| | | | **ಒಟ್ಟು** | **13** | **6** | **7** |
| 1 | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ದ.ಕ ಮಂಗಳೂರು ಕಛೇರಿ(ಜಿಲ್ಲಾ ವಲಯ) | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) | ಬಿ | 1 | 1 | 0 |
| 2 | | ಸಹಕಾರಿ ಸಂಘಗಳ ಹಿರಿಯ ನಿರೀಕ್ಷಕರು (ಮೀನುಗಾರಿಕೆ | ಸಿ | 1 | 0 | 1 |
| 3 | | ಪ್ರಥಮ ದರ್ಜೆ ಸಹಾಯಕರು | ಸಿ | 2 | 2 | 0 |
| 4 | | ದ್ವಿತೀಯ ದರ್ಜೆ ಸಹಾಯಕರು | ಸಿ | 3 | 0 | 3 |
| 5 | | ಹಿರಿಯ ಬೆರಳಚ್ಚುಗಾರರು | ಸಿ | 1 | 1 | 0 |
| 6 | | ವಾಹನ ಚಾಲಕರು | ಸಿ | 1 | 1 | 0 |
| 7 | | ಕಛೇರಿ ಸೇವಕ | ಡಿ | 1 | 0 | 1 |
| 8 | | ಜವಾನ | ಡಿ | 2 | 0 | 2 |
| | | | **ಒಟ್ಟು** | **12** | **5** | **7** |
| | ಮೀನುಗಾರಿಕೆ ಸಹಾಯಕ ನಿರ್ದೇಶಕರು, ದ.ಕ ಮಂಗಳೂರು (ಜಿಲ್ಲಾ ವಲಯ) | ಮೀನುಗಾರಿಕೆ ಸಹಾಯಕ ನಿರ್ದೇಶಕರು | ಬಿ | 1 | 1 | 0 |
| | | ದ್ವಿತೀಯ ದರ್ಜೆ ಸಹಾಯಕರು | ಸಿ | 1 | 0 | 1 |
| | | ಮೀನುಗಾರಿಕೆ ಮೇಲ್ವಿಚಾರಕರು (ರಾಜ್ಯ ವಲಯ) | ಸಿ | 1 | 1 | 0 |
| | | ಮೀನುಗಾರಿಕೆ ಮೇಲ್ವಿಚಾರಕರು (ಜಿಲ್ಲಾ ವಲಯ) | ಸಿ | 2 | 2 | 0 |
| | | ಮೀನುಗಾರಿಕೆ ಕ್ಷೇತ್ರಪಾಲಕರು | ಸಿ | 3 | 0 | 3 |
| | | ಜವಾನ | ಡಿ | 2 | 1 | 1 |
| | | ಕಾವಲುಗಾರ | ಡಿ | 1 | 0 | 1 |
| | | | **ಒಟ್ಟು** | **11** | **5** | **6** |

| | | | | | | |
|---|---|---|---|---|---|---|
| | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, (ದೋಣಿ ಮತ್ತು ಸಲಕರಣೆ) ಮಂಗಳೂರು ಕಛೇರಿ(ಜಿಲ್ಲಾ ವಲಯ) | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು | ಬಿ | 1 | 1 | 0 |
| | | ಮೀನುಗಾರಿಕೆ ಸಹಾಯಕ ನಿರ್ದೇಶಕರು | ಬಿ | 1 | 1 | 0 |
| | | ಪ್ರಥಮ ದರ್ಜೆ ಸಹಾಯಕರು | ಸಿ | 2 | 0 | 2 |
| | | ಹಿರಿಯ ಬೆರಳಚ್ಚುಗಾರರು | ಸಿ | 1 | 1 | 2 |
| | | ಜವಾನ | ಡಿ | 2 | 0 | 2 |
| | | | **ಒಟ್ಟು** | **7** | **3** | **4** |
| | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಮಂಗಳೂರು ಮೀನುಗಾರಿಕೆ ಬಂದರು ಯೋಜನೆ | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) | ಎ | 1 | 1 | – |
| | | ಪ್ರಥಮ ದರ್ಜೆ ಸಹಾಯಕರು | ಸಿ | 1 | 1 | – |
| | | **ದ.ಕ ಜಿಲ್ಲೆಯ ಒಟ್ಟು** | | **45** | **21** | **24** |

*******

## ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3247 ರ

## ಅನುಬಂಧ-2

### ಹೊರಗುತ್ತಿಗೆ ನೌಕರರ ಮಾಹಿತಿ

**ಇಲಾಖೆ: ಮೀನುಗಾರಿಕೆ**

| ಕ್ರ ಸಂ | ಕಛೇರಿಯ ಹೆಸರು | ಪದನಾಮ | ವೃಂದ | ಹುದ್ದೆಗಳು |
|---|---|---|---|---|
| 1 | ಮೀನುಗಾರಿಕೆ ಹಿರಿಯ ಉಪನಿರ್ದೇಶಕರು, ಮಂಗಳೂರು ಕಛೇರಿ (ರಾಜ್ಯ ವಲಯ) | ಡಾಟಾ ಎಂಟ್ರಿ ಆಪರೇಟರ್ | ಸಿ | 1 |
| 2 | | ಗ್ರೂಪ್ ಡಿ | ಡಿ | 1 |
| | | | ಒಟ್ಟು | 2 |
| 1 | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು ದ.ಕ ಮಂಗಳೂರು ಕಛೇರಿ (ಜಿಲ್ಲಾ ವಲಯ) | ಗ್ರೂಪ್ ಡಿ | ಡಿ | 1 |
| | | | ಒಟ್ಟು | 1 |
| | | | ದ.ಕ ಜಿಲ್ಲೆಯ ಒಟ್ಟು | 3 |

******

# ಕರ್ನಾಟಕ ವಿಧಾನ ಸಭೆ

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3278

2 ಸದಸ್ಯರ ಹೆಸರು : ಶ್ರೀ ಮಂಜುನಾಥ. ಆರ್ (ದಾಸರಹಳ್ಳಿ)

3 ಉತ್ತರಿಸುವ ದಿನಾಂಕ : 23-03-2021

4 ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಬರುವ ರಾಜಕಾಲುವೆಗಳ ಉದ್ದಳತೆಯ ಮಾಹಿತಿ ಇದೆಯೇ; ಇದ್ದಲ್ಲಿ, ಈ ಅಳತೆಯಲ್ಲಿ ಎಷ್ಟು ಭಾಗದಷ್ಟು ತಡೆಗೋಡೆ ನಿರ್ಮಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಒಟ್ಟು 64.88 ಕಿ.ಮೀ ನಷ್ಟು ರಾಜಕಾಲುವೆಗಳು ಇದ್ದು, ಇದರಲ್ಲಿ ಸುಮಾರು 12.00 ಕಿ.ಮೀ ಉದ್ದದಷ್ಟು ಆರ್.ಸಿ.ಸಿ ತಡೆಗೋಡೆ ನಿರ್ಮಿಸಲಾಗಿರುತ್ತದೆ. ಮುಂದುವರೆದು, ಈ ಹಿಂದೆ ಇದ್ದ ದಾಸರಹಳ್ಳಿ ಪುರಸಭೆಯಿಂದ ಸುಮಾರು 20.00 ಕಿ.ಮೀನಷ್ಟು SSM ತಡೆಗೋಡೆಯನ್ನು ನಿರ್ಮಿಸಲಾಗಿರುತ್ತದೆ. |
| ಆ) | ಈ ಕ್ಷೇತ್ರದ ರಾಜಕಾಲುವೆಗೆ ತಡೆಗೋಡೆಗಳಿಲ್ಲದೆ ಮಳೆಗಾಲದಲ್ಲಿ ತಗ್ಗು ಪ್ರದೇಶಗಳಿಗೆ ಹಲವಾರು ಬಾರಿ ನೀರು ನುಗ್ಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಸಮಸ್ಯೆ ನಿವಾರಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಂಪೂರ್ಣ ವಿವರ ನೀಡುವುದು) | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ರಾಜಕಾಲುವೆಗೆ ತಡೆಗೋಡೆಗಳಿಲ್ಲದೆ ಮಳೆಗಾಲದಲ್ಲಿ ಹಲವಾರು ಬಾರಿ ತಗ್ಗು ಪ್ರದೇಶಗಳಿಗೆ ನೀರು ನುಗ್ಗಿರುವುದು ಗಮನಕ್ಕೆ ಬಂದಿರುತ್ತದೆ.<br><br>ಮುಖ್ಯಮಂತ್ರಿಗಳ ನವನಗರೋತ್ಥಾನ ಯೋಜನೆ ಅಡಿಯಲ್ಲಿ ರೂ. 16.54 ಕೋಟಿಗಳಷ್ಟು ಹಣವನ್ನು ಬೃಹತ್ ನೀರುಗಾಲುವೆಗೆ ಆರ್.ಸಿ.ಸಿ ತಡೆಗೋಡೆ ನಿರ್ಮಿಸಲು ಅನುದಾನ ನೀಡಲಾಗಿದ್ದು, ಬೃಹತ್ ನೀರುಗಾಲುವೆಯ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br><br>ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯವ್ಯಯದಲ್ಲಿ ರೂ. 7.00 ಕೋಟಿಗಳ ಅನುದಾನ ನೀಡಲಾಗಿದ್ದು, ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಕಾಮಗಾರಿಯ ಸಂಪೂರ್ಣ ವಿವರಗಳನ್ನು **ಅನುಬಂಧ-1ರಲ್ಲಿ ನೀಡಿದೆ.** |
| ಇ) | ಸದರಿ ಕ್ಷೇತ್ರ ವ್ಯಾಪ್ತಿಯಲ್ಲಿ ರಾಜಕಾಲುವೆಯ ಸ್ಥಳಗಳಲ್ಲಿ ಒತ್ತುವರಿ ಮಾಡಿ ಕಟ್ಟಡಗಳನ್ನು ನಿರ್ಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ಹಾಗೂ ನಿರ್ದೇಶನವಿದ್ದರೂ ಸಹ ಒತ್ತುವರಿ ತೆರವುಗೊಳಿಸಲು ಕ್ರಮ ಕೈಗೊಳ್ಳದಿರಲು ಕಾರಣವೇನು; | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 165 ಸ್ಥಳಗಳಲ್ಲಿ ಬೃಹತ್ ನೀರುಗಾಲುವೆ ಒತ್ತುವರಿಗಳನ್ನು ಗುರುತಿಸಲಾಗಿದ್ದು, ಇಲ್ಲಿಯವರೆಗೆ 44 ಒತ್ತುವರಿಗಳನ್ನು ತೆರವುಗೊಳಿಸಲಾಗಿದ್ದು, ಬಾಕಿ ಉಳಿದಿರುವ 121 ಒತ್ತುವರಿಗಳನ್ನು ಹಂತ ಹಂತವಾಗಿ ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

| | | |
|---|---|---|
| ಈ) | ಸದರಿ ಕ್ಷೇತ್ರದ ವ್ಯಾಪ್ತಿಯಲ್ಲಿ ರಾಜಕಾಲುವೆಯಿಂದ ನೀರು ನುಗ್ಗಿ ಸಂಕಷ್ಟಕ್ಕೆ ಒಳಗಾಗಿರುವವರಿಗೆ ಈವರೆಗೆ ಎಷ್ಟು ಮೊತ್ತದ ಪರಿಹಾರವನ್ನು ವಿತರಿಸಲಾಗಿದೆ; ಈ ಸಮಸ್ಯೆಯನ್ನು ನಿವಾರಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ನೀಡುವುದು) | ದಾಸರಹಳ್ಳಿ ವಲಯ ವ್ಯಾಪ್ತಿಯಲ್ಲಿ 2020-21ನೇ ಸಾಲಿನಲ್ಲಿ ಈವರೆಗೆ ರೂ. 1,63,000-00ಗಳ ಮಳೆ ಪರಿಹಾರ ಮೊತ್ತವನ್ನು ವಿತರಿಸಲು ಕ್ರಮಕೈಗೊಳ್ಳಲಾಗಿರುತ್ತದೆ.<br><br>ಸದರಿ ಸಮಸ್ಯೆಯನ್ನು ನಿವಾರಿಸಲು ಮುಖ್ಯಮಂತ್ರಿಗಳ ನವನಗರೋತ್ಥಾನ ಯೋಜನೆ ಅಡಿಯಲ್ಲಿ ರೂ. 16.54 ಕೋಟಿಗಳಷ್ಟು ಹಣವನ್ನು ಬೃಹತ್ ನೀರುಗಾಲುವೆಗೆ ಆರ್.ಸಿ.ಸಿ ತಡೆಗೋಡೆ ನಿರ್ಮಿಸಲು ಅನುದಾನ ನೀಡಲಾಗಿದ್ದು, ಬೃಹತ್ ನೀರುಗಾಲುವೆಯ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br><br>ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯವ್ಯಯದಲ್ಲಿ ರೂ.7.00 ಕೋಟಿಗಳ ಅನುದಾನ ನೀಡಲಾಗಿದ್ದು, ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

**ನಅಇ 152 ಎಂಎನ್‌ಯು 2021**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

[illegible] 3278ಕ್ಕೆ ಅನುಬಂಧ-1



## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

### ದಾಸರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಕೈಗೊಂಡಿರುವ ಕಾಮಗಾರಿಗಳ ವಿವರಗಳು

| Sl.No | Name of the work | Amount (Rs in Lakhs) | Remarks |
|---|---|---|---|
| 1 | Construction of SWD U-Shape Drain at Abbigere Police Station Road to Juice Factory in Ward No.12 | 700.00 | Tender in process |
| 2 | Construction / Remodeling of Primary, Secondary and Tertiary drains, Culverts / Bridges and all other allied works of SWD spread out at various location in Dasarahalli Zone under CMNNY Scheme Package 01 2019-20 Dasarahalli Zone G.O-ANNEXURE-03 Action Plan Sl No 81 82 83 84 | 1654.00 | Work in progress |
| | Total | 2354.00 | |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3278
2. ಸದಸ್ಯರ ಹೆಸರು : ಶ್ರೀ ಮಂಜುನಾಥ ಆರ್.
3. ಉತ್ತರಿಸುವ ದಿನಾಂಕ : 23-03-2021
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಬರುವ ರಾಜಕಾಲುವೆಗಳ ಉದ್ದಳತೆಯ ಮಾಹಿತಿ ಇದೆಯೇ; ಇದ್ದಲ್ಲಿ, ಈ ಅಳತೆಯಲ್ಲಿ ಎಷ್ಟು ಭಾಗದಷ್ಟು ತಡೆಗೋಡೆ ನಿರ್ಮಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ರಾಜಕಾಲುವೆಗಳ ಉದ್ದ 64.88 ಕಿ.ಮೀ ಉದ್ದ ಇದ್ದು, ಇದರಲ್ಲಿ ಸುಮಾರು 12.00 ಕಿ.ಮೀ ಉದ್ದದಷ್ಟು ಆರ್.ಸಿ.ಸಿ ತಡೆಗೋಡೆ ನಿರ್ಮಿಸಲಾಗಿರುತ್ತದೆ. ಮುಂದುವರೆದು, ಈ ಹಿಂದೆ ಇದ್ದ ದಾಸರಹಳ್ಳಿ ಪುರಸಭೆಯಿಂದ SSM ತಡೆಗೋಡೆಯನ್ನು ಸುಮಾರು 20.00 ಕಿ.ಮೀನಷ್ಟು ನಿರ್ಮಿಸಲಾಗಿರುತ್ತದೆ. |
| ಆ | ಈ ಕ್ಷೇತ್ರದ ರಾಜಕಾಲುವೆಗ ತಡೆಗೋಡೆಗಳಿಲ್ಲದೆ ಮಳೆಗಾಲದಲ್ಲಿ ತಗ್ಗು ಪ್ರದೇಶಗಳಿಗ ಹಲವಾರು ಬಾರಿ ನೀರು ನುಗ್ಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಸಮಸ್ಯೆ ನಿವಾರಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಂಪೂರ್ಣ ವಿವರ ನೀಡುವುದು) | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ರಾಜಕಾಲುವೆಗೆ ತಡೆಗೋಡೆಗಳಿಲ್ಲದೆ ಮಳೆಗಾಲದಲ್ಲಿ ಹಲವಾರು ಬಾರಿ ತಗ್ಗು ಪ್ರದೇಶಗಳಿಗೆ ನೀರು ನುಗ್ಗಿರುವುದು ಗಮನಕ್ಕೆ ಬಂದಿರುತ್ತದೆ ಹಾಗೂ ಮುಖ್ಯಮಂತ್ರಿಗಳ ನವನಗರೋತ್ಥಾನ ಯೋಜನೆ ಅಡಿಯಲ್ಲಿ ರೂ. 16.54 ಕೋಟಿಗಳಷ್ಟು ಹಣವನ್ನು ಬೃಹತ್ ನೀರುಗಾಲುವೆಗೆ ಆರ್.ಸಿ.ಸಿ ತಡೆಗೋಡೆ ನಿರ್ಮಿಸಲು ಅನುದಾನ ನೀಡಲಾಗಿದ್ದು, ಬೃಹತ್ ನೀರುಗಾಲುವೆಯ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br>ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯವ್ಯಯದಲ್ಲಿ ರೂ. 7.00 ಕೋಟಿಗಳ ಅನುದಾನ ನೀಡಲಾಗಿದ್ದು, ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಕಾಮಗಾರಿಯ ಸಂಪೂರ್ಣ ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಇ | ಸದರಿ ಕ್ಷೇತ್ರ ವ್ಯಾಪ್ತಿಯಲ್ಲಿ ರಾಜಕಾಲುವೆಯ ಸ್ಥಳಗಳಲ್ಲಿ ಒತ್ತುವರಿ ಮಾಡಿ ಕಟ್ಟಡಗಳನ್ನು ನಿರ್ಮಿಸಿರುವುದು ಸರ್ಕಾರದ ಗಮನಕ್ಕ ಬಂದಿದೆಯೇ; ಬಂದಿದ್ದಲ್ಲಿ, ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ಹಾಗೂ ನಿರ್ದೇಶನವಿದ್ದರೂ ಸಹ ಒತ್ತುವರಿ ತೆರವುಗೊಳಿಸಲು ಕ್ರಮ ಕೈಗೊಳ್ಳದಿರಲು ಕಾರಣವೇನು; | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 165 ಸ್ಥಳಗಳಲ್ಲಿ ಬೃಹತ್ ನೀರುಗಾಲುವೆ ಒತ್ತುವರಿಗಳನ್ನು ಗುರುತಿಸಲಾಗಿದ್ದು, ಇಲ್ಲಿಯವರೆಗೆ 44 ಒತ್ತುವರಿಗಳನ್ನು ತೆರವುಗೊಳಿಸಲಾಗಿದ್ದು, ಬಾಕಿ ಉಳಿದಿರುವ 121 ಒತ್ತುವರಿಗಳನ್ನು ಹಂತ ಹಂತವಾಗಿ ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ | ಸದರಿ ಕ್ಷೇತ್ರದ ವ್ಯಾಪ್ತಿಯಲ್ಲಿ ರಾಜಕಾಲುವೆಯಿಂದ ನೀರು ನುಗ್ಗಿ ಸಂಕಷ್ಟಕ್ಕೆ ಒಳಗಾಗಿರುವವರಿಗೆ ಈವರಗೆ ಎಷ್ಟು ಮೊತ್ತದ ಪರಿಹಾರವನ್ನು ವಿತರಿಸಲಾಗಿದೆ; ಈ ಸಮಸ್ಯೆಯನ್ನು ನಿವಾರಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ನೀಡುವುದು) | ದಾಸರಹಳ್ಳಿ ವಲಯ ವ್ಯಾಪ್ತಿಯಲ್ಲಿ 2020-21ನೇ ಸಾಲಿನಲ್ಲಿ ಈವರಗೆ ರೂ. 1,63,000-00ಗಳ ಮಳೆ ಪರಿಹಾರ ಮೊತ್ತವನ್ನು ವಿತರಿಸಲು ಕ್ರಮಕೈಗೊಳ್ಳಲಾಗಿರುತ್ತದೆ.<br>ಸದರಿ ಸಮಸ್ಯೆಯನ್ನು ನಿವಾರಿಸಲು ಮುಖ್ಯಮಂತ್ರಿಗಳ ನವನಗರೋತ್ಥಾನ ಯೋಜನೆ ಅಡಿಯಲ್ಲಿ ರೂ. 16.54 ಕೋಟಿಗಳಷ್ಟು ಹಣವನ್ನು ಬೃಹತ್ ನೀರುಗಾಲುವೆಗೆ ಆರ್.ಸಿ.ಸಿ ತಡೆಗೋಡೆ ನಿರ್ಮಿಸಲು ಅನುದಾನ ನೀಡಲಾಗಿದ್ದು, ಬೃಹತ್ ನೀರುಗಾಲುವೆಯ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. |



| | | |
|---|---|---|
| | | ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯವ್ಯಯದಲ್ಲಿ ರೂ.7.00 ಕೋಟಿಗಳ ಅನುದಾನ ನೀಡಲಾಗಿದ್ದು, ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಕಾಮಗಾರಿಯ ಸಂಪೂರ್ಣ ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |

20.3.21

ವಿಶೇಷ ಆಯುಕ್ತರು (ಆಡಳಿತ)

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2292
2. ಸದಸ್ಯರ ಹೆಸರು : ಶ್ರೀಮತಿ ಸೌಮ್ಯರೆಡ್ಡಿ (ಜಯನಗರ)
3. ಉತ್ತರಿಸುವ ದಿನಾಂಕ : 23-03-2021
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಜಯನಗರ ಮತಕ್ಷೇತ್ರದ ಬಿ.ಬಿ.ಎಂ.ಪಿ ವಾರ್ಡ್-168ರ ಹಿಂಬದಿಯಲ್ಲಿ ಬ್ಯಾಸ್ಕೆಟ್ ಬಾಲ್ ಮೈದಾನದ ಅಭಿವೃದ್ಧಿ ಕಾರ್ಯಗಳಿಗೆ ಸರ್ಕಾರ ಕೈಗೊಂಡ ಕ್ರಮವೇನು; | ಜಯನಗರ ಮತಕ್ಷೇತ್ರದ ಬಿ.ಬಿ.ಎಂ.ಪಿ ವಾರ್ಡ್-168ರ ಹಿಂಬದಿಯಲ್ಲಿ ಬ್ಯಾಸ್ಕೆಟ್ ಬಾಲ್ ಮೈದಾನದ ಅಭಿವೃದ್ಧಿಗೆ ಯಾವುದೇ ಅನುದಾನ ಅನುಮೋದನೆಯಾಗಿರುವುದಿಲ್ಲ. ಮುಂದೆ ಅನುದಾನ ಲಭ್ಯತೆಯನುಸಾರ ಸದರಿ ಬ್ಯಾಸ್ಕೆಟ್ ಬಾಲ್ ಮೈದಾನದ ಅಭಿವೃದ್ಧಿ ಕೈಗೊಳ್ಳಲು ನಿಯಮಾನುಸಾರ ಕ್ರಮವಹಿಸಲಾಗುವುದು. |
| ಆ | ಈ ಮತ ಕ್ಷೇತ್ರದ ಕೇಂದ್ರ ಯೋಜನೆ ಅಡಿಯಲ್ಲಿ ಬ್ಯಾಲೆನ್ಸ್ ರಸ್ತೆಗಳ ಕಾಂಕ್ರಿಟಿಂಗ್ (ವೈಟ್ ಟಾಪಿಂಗ್) ಹಾನಿಗೆ ಪ್ರಮುಖ ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳಿಗೆ ಬಿಬಿಎಂಪಿ ಆಯವ್ಯಯದಲ್ಲಿ ಅನುದಾನ ಹಂಚಿಕೆ ಮಾಡಲಾಗಿದ್ದರೂ ಸಹ ಕಾಮಗಾರಿ ಪೂರ್ಣಗೊಂಡಿಲ್ಲದೆ, ಇರುವುದಕ್ಕೆ ಕಾರಣಗಳೇನು: | ಜಯನಗರ ವಾಣಿಜ್ಯ ಸಂಕೀರ್ಣದ ಸುತ್ತಮುತ್ತಲಿನ ರಸ್ತೆಗಳಾದ 27ನೇ ಅಡ್ಡರಸ್ತೆ ಮತ್ತು 30ನೇ ಅಡ್ಡರಸ್ತೆಯಲ್ಲಿ ಎಲ್ಲಾ ಕೆಲಸಗಳನ್ನು ಪೂರ್ಣಗೊಳಿಸಿ ಸಾರ್ವಜನಿಕರ ಉಪಯೋಗಕ್ಕೆ ಈಗಾಗಲೇ ಮುಕ್ತಗೊಳಿಸಲಾಗಿರುತ್ತದೆ.<br><br>ಮುಂದುವರೆದು, 9ನೇ ಮುಖ್ಯರಸ್ತೆ ಮತ್ತು 10ನೇ ಮುಖ್ಯರಸ್ತೆಯಲ್ಲಿ ಭೌತಿಕ ಕೆಲಸಗಳನ್ನು ಪೂರ್ಣಗೊಳಿಸಿದ್ದು, ಉಳಿದಿರುವ ಕೆಲಸಗಳಾದ ಒಂದು ಭಾಗದ 400.00 ಮೀಟರ್ ಉದ್ದದ ಪಾದಚಾರಿ ಮಾರ್ಗದ ಕಾರ್ಯಗಳನ್ನು ದಿನಾಂಕ: 15-05-2021 ರೊಳಗಾಗಿ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br><br>2019-20ನೇ ಮತ್ತು 2020-21ನೇ ಸಾಲಿನ ಸರ್ಕಾರದ ಅನುದಾನದಲ್ಲಿ ಜಯನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಅನುಮೋದನೆ ನೀಡಲಾಗಿರುವ ಒಟ್ಟು 6 ಪ್ರಮುಖ ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿರುತ್ತದೆ. ಕಾಮಗಾರಿಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಇ | ಪ್ರಮುಖ ರಸ್ತೆಗಳ ಆಗಲೀಕರಣ ಕಾಮಗಾರಿಗಳನ್ನು ಯಾವಾಗ ಕೈಗೆತ್ತಿಕೊಳ್ಳಲಾಗುವುದು | ಜಯನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪ್ರಮುಖ ರಸ್ತೆಗಳ ಅಗಲೀಕರಣಕ್ಕೆ ಸಂಬಂಧಿಸಿದ ಯಾವುದೇ ಯೋಜನೆಯು ಇರುವುದಿಲ್ಲ. |
| ಈ | ಜಯನಗರ ಕ್ಷೇತ್ರದ ವಾರ್ಡ್ 168 ರಲ್ಲಿ ಟೆಂಡರ್ ಖಚಿತ ರಸ್ತೆ / ಫುಟ್‌ಪಾತ್ ಸೌಲಭ್ಯವನ್ನು ಯಾವಾಗ ಒದಗಿಸಲಾಗುವುದು. | 2017-18ನೇ ಸಾಲಿನ ಸರ್ಕಾರದ ಅನುದಾನದಲ್ಲಿ ಅನುಮೋದನೆಯಾಗಿದ್ದ Non Motorized Transit (NMT) ಯೋಜನೆಯಡಿ ಜಯನಗರ ವಿಧಾನ ಸಭಾ ಕ್ಷೇತ್ರದ ವಾರ್ಡ್ ಸಂಖ್ಯೆ-168ರ ವ್ಯಾಪ್ತಿಯ 33ನೇ ಅಡ್ಡರಸ್ತೆ, 36ನೇ ಅಡ್ಡರಸ್ತೆ, 38ನೇ ಅಡ್ಡರಸ್ತೆ, 18ನೇ ಮುಖ್ಯರಸ್ತೆ ಮತ್ತು 9ನೇ |

| | | |
|---|---|---|
| | | ಮುಖ್ಯರಸ್ತೆಗಳಲ್ಲಿ ಒಟ್ಟು ಸುಮಾರು 2.73 ಕಿ.ಮೀ ಉದ್ದಕ್ಕೆ ಪಾದಚಾರಿ ಮಾರ್ಗಗಳನ್ನು ಅಭಿವೃದ್ಧಿಪಡಿಸಲಾಗಿದೆ.<br>ಜಯನಗರ ಕ್ಷೇತ್ರದ ವ್ಯಾಪ್ತಿಯಲ್ಲಿನ ವಾರ್ಡ್ ಸಂಖ್ಯೆ: 168ರ 24ನೇ ಮುಖ್ಯರಸ್ತೆಯಲ್ಲಿ ಟೆಂಡರ್ ಶ್ಯೂರ್ ಮಾದರಿಯಲ್ಲಿ ಅಭಿವೃದ್ಧಿ ಪಡಿಸಲಾಗುತ್ತಿರುವ ಪಾದಚಾರಿ ಮಾರ್ಗದ ಉಳಿದಿರುವ ಕೆಲಸಗಳಿಗೆ ಅಗತ್ಯವಿರುವ ಹೆಚ್ಚುವರಿ ಅನುದಾನವನ್ನು 2021-22ನೇ ಸಾಲಿನ ಪಾಲಿಕೆಯ ಅನುದಾನದಲ್ಲಿ ಕಲ್ಪಿಸಿಕೊಳ್ಳಲು ಅನುಮೋದನೆಗಾಗಿ ಕ್ರಮ ಕೈಗೊಂಡಿದ್ದು, ಅನುದಾನ ಬಿಡುಗಡೆ ಆದ ನಂತರ ಉಳಿದಿರುವ ಎಲ್ಲಾ ಕೆಲಸಗಳನ್ನು ಅತೀ ಶೀಘ್ರವಾಗಿ ಪೂರ್ಣಗೊಳಿಸಿ ಅನುಷ್ಠಾನಗೊಳಿಸಲಾಗುತ್ತದೆ. |
| ಉ | ಜಯನಗರದ ವಿವಿಧ ಸ್ಥಳಗಳಲ್ಲಿ ಬೀದಿ ದೀಪಗಳಿಗೆ ಎಲ್.ಇ.ಡಿ ದೀಪಗಳನ್ನು ಅಳವಡಿಸುವ ಕೆಲಸ ಯಾವಾಗ ಕೈಗೊಳ್ಳಲಾಗುವುದು; | ಸಾರ್ವಜನಿಕರ ಸುರಕ್ಷತೆ ಮತ್ತು ಹಿತದೃಷ್ಟಿಯಿಂದ ಟೆಂಡರ್ ಮೂಲಕ ಗುತ್ತಿಗೆದಾರರನ್ನು ನಿಯೋಜಿಸಿ ಹಾಲಿ ಇರುವ ಬೀದಿ ದೀಪಗಳ ದುರಸ್ಥಿ ಮತ್ತು ನಿರ್ವಹಣೆಯನ್ನು ಕೈಗೊಳ್ಳಲಾಗುತ್ತಿದೆ. ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಎಲ್ಲಾ 198 ವಾರ್ಡ್‌ಗಳಲ್ಲಿರುವ ಸರಿ ಸುಮಾರು 4.85 ಲಕ್ಷ ಬೀದಿ ದೀಪಗಳ ಬಳಕೆಯಿಂದ ಶೇ.85.50 ರಷ್ಟು ವಿದ್ಯುಚ್ಛಕ್ತಿ ಉಳಿತಾಯಗೊಳಿಸುವ ESCO ಮಾದರಿಯಲ್ಲಿ LED ದೀಪಗಳನ್ನಾಗಿ ಪರಿವರ್ತಿಸುವ ಯೋಜನೆಯನ್ನು 05 ಹಂತಗಳಲ್ಲಿ ಕೈಗೊಂಡು ಅನುಷ್ಠಾನಗೊಳಿಸಬೇಕಾಗಿರುತ್ತದೆ.<br>ದಿನಾಂಕ: 18-06-2020 ರಿಂದ ಮೊದಲನೇ ಹಂತದಲ್ಲಿ (Phase-1) M/s. BSPL ರವರು ಒಂದು ಲಕ್ಷ ಬೀದಿ ದೀಪಗಳ ಸರ್ವೇ ಕಾರ್ಯವನ್ನು ದಾಸರಹಳ್ಳಿ, ರಾಜರಾಜೇಶ್ವರಿ ನಗರ ಮತ್ತು ಬೊಮ್ಮನಹಳ್ಳಿ ವಲಯಗಳಲ್ಲಿ ಪೂರ್ಣಗೊಳಿಸಿದ್ದು, ಎರಡನೇ ಹಂತದ (Phase 2) ಸರ್ವೇ ಕಾರ್ಯವನ್ನು ದಕ್ಷಿಣ ವಲಯದಲ್ಲಿ ಪ್ರಾರಂಭಿಸಿರುತ್ತಾರೆ. ಬಿಬಿಎಂಪಿ ವ್ಯಾಪ್ತಿಯಲ್ಲಿನ ಎಲ್ಲಾ ಬೀದಿ ದೀಪಗಳನ್ನು 30 ತಿಂಗಳೊಳಗೆ LED ದೀಪಗಳನ್ನಾಗಿ ಪರಿವರ್ತನೆಗೊಳಿಸಿ ಯೋಜನೆಯನ್ನು ಪೂರ್ಣ ಪ್ರಮಾಣದಲ್ಲಿ ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ. |
| ಊ | ಫುಟ್‌ಪಾತ್ ಅತಿಕ್ರಮಣವನ್ನು ತಪ್ಪಿಸಲು ಅಗತ್ಯವಿರುವ ಕಡೆಗಳೆಲ್ಲಾ ಹಾಕಿಂಗ್ ವಲಯಗಳನ್ನು ಒದಗಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಫುಟ್‌ಪಾತ್ ಅತಿಕ್ರಮಣವನ್ನು ತಡೆಯಲು ವಾರ್ಡ್ / ಉಪ ವಿಭಾಗ / ವಿಭಾಗದ ಅಧಿಕಾರಿಗಳಿಂದ ಆಗಾಗ್ಗೆ ಫುಟ್‌ಪಾತ್ ತೆರವು ಕಾರ್ಯಾಚರಣೆಯನ್ನು ಹಮ್ಮಿಕೊಂಡು ಕ್ರಮವಹಿಸಲಾಗುತ್ತಿದೆ. ಹಾಕಿಂಗ್ ವಲಯಗಳನ್ನು ಸ್ಥಾಪಿಸುವ ಅವಶ್ಯಕತೆ ಇದ್ದು, ಈ ಕಾರ್ಯಕ್ಕೆ ಅವಶ್ಯವಿರುವ ಸ್ಥಳಗಳನ್ನು ಗುರುತಿಸಬೇಕಾಗಿರುತ್ತದೆ. |

**ಸಂಖ್ಯೆ: ನಅಇ 93 ಎಂಎನ್‌ವೈ 2021 (ಇ)**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ)
ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ: 22 ಗೆ ಅನುಬಂಧ-1

ಅನುಬಂಧ-1

| Sl. No. | Roads |
|---|---|
| | Name of Work: Improvements and asphalting to selected Arterial, Sub arterial and other connecting roads in Jayanagar Assembly Constituency. (Package No.2018-19 S1) |
| 1 | Asphalting to 9th main road from 30th cross to 46th cross in Jayanagara |
| 2 | Asphalting to 28th main road from 30th cross to 36th cross in jayanagara |
| 3 | Asphalting to 36th cross from 16th main to Banneragatta Road |
| 4 | Comprehensive Development of 30th cross from 4th main to 9th main including asphalting to Diagonal Road and Swagath Theater Road in Jayanagar Constituency |
| 5 | Comprehensive Development of 16th main Road Jayanagara |
| 6 | Comprehensive Development of 27th cross road from Kanakapura Main to 11th main Road Jayanagara |

Assistant Executive Engineer
Road Infrastructure - South
Bruhat Bangalore Mahanagara Palike

Executive Engineer
Road Infrastructure - South
Bruhat Bangalore Mahanagara Palike

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 3336 |
| ಸದಸ್ಯರ ಹೆಸರು | : ಶ್ರೀ.ಸುಬ್ಬಾರೆಡ್ಡಿ ಎಸ್.ಎನ್. (ಬಾಗೆಪಲ್ಲಿ) |
| ಉತ್ತರಿಸಬೇಕಾದ ದಿನಾಂಕ | : 23-03-2021 |
| ಉತ್ತರಿಸಬೇಕಾದ ಸಚಿವರು | : ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡೆ ಹಾಗೂ ಯೋಜನಾ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೆ.ಡಿ.ಪಿ(ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ) ಸಭೆಯನ್ನು ನಡೆಸಲು ಯಾವ ವರ್ಷದಿಂದ ಪ್ರಾರಂಭ ಮಾಡಲಾಗಿದೆ. | ಕೆ.ಡಿ.ಪಿ ಸಭೆಯನ್ನು 1983 ರಿಂದ ನಡೆಸಲಾಗುತ್ತಿದೆ. |
| ಆ | ಈ ಕೆ.ಡಿ.ಪಿ ಸಭೆಯ ಮೂಲ ಉದ್ದೇಶಗಳೇನು; ( ಪೂರ್ಣ ವಿವರ ನೀಡುವುದು) | ರಾಜ್ಯದ ಒಟ್ಟಾರೆ ಅಭಿವೃದ್ಧಿಯನ್ನು ಉತ್ತಮ ಪಡಿಸಲು ಎಲ್ಲಾ ಆಡಳಿತ ಇಲಾಖೆಗಳ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆಯನ್ನು ಕಾಲಕಾಲಕ್ಕೆ ರಾಜ್ಯ/ ಜಿಲ್ಲಾ/ತಾಲ್ಲುಕು ಮಟ್ಟಗಳಲ್ಲಿ ಸಭೆಗಳನ್ನು ನಡೆಸಿ ಪ್ರಗತಿಯನ್ನು ತ್ವರಿತಗೊಳಿಸುವುದು ಕೆ.ಡಿ.ಪಿ ಸಭೆಯ ಮೂಲ ಉದ್ದೇಶವಾಗಿದೆ. |
| ಇ | ಆದರೆ, ಶಾಸಕರು 3 ತಿಂಗಳಿಗೊಮ್ಮೆ ನಡೆಸುವ ತಾಲ್ಲಾಕು ಕೆ.ಡಿ.ಪಿ ಹಾಗೂ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆಸುವ ಜಿಲ್ಲಾ ಕೆ.ಡಿ.ಪಿ. ಗಳಲ್ಲಿ ನೀಡಿದ ಯಾವುದೇ ಸೂಚನೆಗಳಿಗೆ ಪರಿಹಾರ ನೀಡುವಲ್ಲಿ ಅಧಿಕಾರಿಗಳು ವಿಫಲರಾಗುತ್ತಿದ್ದು, ಕೆಡಿಪಿ ಸಭೆಯ ಮೂಲ ಉದ್ದೇಶ ಇಲ್ಲದಂತಾಗಿರುವುದು ನಿಜವೇ; | ಇಲ್ಲ, ತಾಲೂಕು ಕೆ.ಡಿ.ಪಿ ಹಾಗೂ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆಸುವ ಜಿಲ್ಲಾ ಕೆ.ಡಿ.ಪಿ. ಗಳಲ್ಲಿ ಸೂಚನೆಗಳನ್ನು ಹಾಗೂ ಮೂಲ ಉದ್ದೇಶವನ್ನು ಪಾಲಿಸಲಾಗುತ್ತಿದೆ. |
| ಈ | ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರದ ಕೆ.ಡಿ.ಪಿ ಸಭೆಗಳಲ್ಲಿ ನೀಡಿರುವ ಯಾವ ಯಾವ ಸೂಚನೆಗಳನ್ನು ಬಗೆಹರಿಸಲಾಗಿದೆ;( ಕಳೆದ 6 ಸಭೆಗಳ ಮಾಹಿತಿ ನೀಡುವುದು) | ೧. ಬಾಗೇಪಲ್ಲಿ ತಾಲ್ಲೂಕಿನಲ್ಲಿ ಕಳೆದ 6 ಕೆ.ಡಿ.ಪಿ ಸಭೆಗಳಲ್ಲಿ ಒಟ್ಟು 39 ಸೂಚನೆಗಳು ಬಂದಿದ್ದು, ಇದರಲ್ಲಿ 26 ಸೂಚನೆಗಳನ್ನು ಬಗೆಹರಿಸಲಾಗಿದ್ದು, 02 ಪ್ರಕರಣಗಳು ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ.ಉಳಿದಂತೆ 11 ಸೂಚನೆಗಳನ್ನು ಸಂಬಂಧಿಸಿದ ಇಲಾಖೆಗಳಿಗೆ ಕ್ರಮಕ್ಕಾಗಿ ವರ್ಗಾಯಿಸಲಾಗಿದೆ.<br>೨. ಗುಡಿಬಂಡೆ ತಾಲ್ಲೂಕಿನಲ್ಲಿ ಕಳೆದ 6 ಕೆ.ಡಿ.ಪಿ ಸಭೆಗಳಲ್ಲಿ ಒಟ್ಟು 32 ಸೂಚನೆಗಳು ಬಂದಿದ್ದು, ಇದರಲ್ಲಿ 32 ಸೂಚನೆಗಳನ್ನು ಬಗೆಹರಿಸಲಾಗಿದೆ.<br>ವಿವರಗಳನ್ನು ಅನುಬಂಧ-೧ ರಲ್ಲಿ ನೀಡಲಾಗಿದೆ. |

| | | |
|---|---|---|
| | | |
| ಉ | ಕೆಡಿಪಿ ಸಭೆಗಳಿಗೆ ಗೈರು ಹಾಜರಾದರೆ ಯಾವ ಕ್ರಮ ಕೈಗೊಳ್ಳಲಾಗುವುದು? | ಜಿಲ್ಲಾ ಉಸ್ತುವಾರಿ ಸಚಿವರುಗಳ ಅಧ್ಯಕ್ಷತೆಯಲ್ಲಿ ನಡೆಯುವ ಜಿಲ್ಲಾ ಮಟ್ಟದ ಕೆ.ಡಿ.ಪಿ ಸಭೆಗಳಿಗೆ ತಮ್ಮ ಅಧೀನದಲ್ಲಿರುವ ಅಧಿಕಾರಿಗಳನ್ನು ನಿಯೋಜಿಸದೇ ತಾವೇ ಖುದ್ದಾಗಿ ಹಾಜರಾಗಬೇಕೆಂದು ಸುತ್ತೋಲೆ ಸಂಖ್ಯೆ ಪಿಡಿ 5 ಐಎಂಎಂ 2002 ದಿನಾಂಕ : 15-02-2002 ರಲ್ಲಿ ತಿಳಿಸಲಾಗಿರುತ್ತದೆ.ಒಂದು ವೇಳೆ ಅನಿವಾರ್ಯ ಕಾರಣಗಳಿಂದ ಅವರುಗಳು ಸಭೆಗೆ ಖುದ್ದಾಗಿ ಹಾಜರಾಗಲು ಸಾದ್ಯವಿಲ್ಲದ ಪಕ್ಷದಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ಗಮನಕ್ಕೆ ತಂದು , ಜಿಲ್ಲಾ ಉಸ್ತುವಾರಿ ಸಚಿವರುಗಳ ಪೂರ್ವಾನುಮತಿಯನ್ನು ಪಡೆದು ತಮ್ಮ ಹಿರಿಯ ಅಧಿಕಾರಿಗಳನ್ನು ಈ ಸಭೆಗೆ ಹಾಜರಾಗಲು ನಿಯೋಜಿಸತಕ್ಕದ್ದು ಎಂದು ಸೂಚಿಸಲಾಗಿದೆ.<br>ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರದ ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕಿನ ಕೆ.ಡಿ.ಪಿ ಸಭೆಗೆ ಗೈರು ಹಾಜರಾದವರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗುವುದು ಮತ್ತು ಅಗತ್ಯವಿದ್ದಲ್ಲಿ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳಲು ಮೇಲಾಧಿಕಾರಿಗಳಿಗೆ ಕಳುಹಿಸಲು ಶಿಫಾರಸ್ಸು ಮಾಡಲಾಗುವುದು. |

ಸಂಖ್ಯೆ: ಪಿಡಿಎಸ್ 16 ಐಪಿಆರ್ 2021

(ಕೆ.ಸಿ. ನಾರಾಯಣಗೌಡ)
ಯುವ ಸಬಲೀಕರಣ ಮತ್ತು ಕ್ರೀಡೆ
ಹಾಗೂ ಯೋಜನಾ ಸಚಿವರು

ಅನುಬಂಧ-III
**ಬಾಗೇಪಲ್ಲಿ ತಾಲ್ಲೂಕಿನಲ್ಲಿ ಕಳೆದ 6 ಕೆ.ಡಿ.ಪಿ ಸಭೆಗಳಲ್ಲಿ ನೀಡಿರುವ ಸೂಚನೆಗಳು ಹಾಗೂ ತೆಗೆದು ಕೊಂಡ ಕ್ರಮ**

| ಕ್ರ. ಸಂ | ಕೆ.ಡಿ.ಪಿ ನಡೆದ ದಿನಾಂಕ | ಕೆ.ಡಿ.ಪಿ ಸಭೆಯಲ್ಲಿ ನೀಡಿರುವ ಸೂಚನೆಗಳು | ತೆಗೆದುಕೊಂಡ ಕ್ರಮ |
|---|---|---|---|
| 1 | 10-06-2019 | ನಲ್ಲಗುಟ್ಟಪಲ್ಲಿ ಗ್ರಾಮ ಪಂಚಾಯಿತಿಯ ಡಿ.ಇ.ಓ ಬದಲಾವಣೆಗೆ ಕ್ರಮವಹಿಸುವುದು. | ಕ್ರಮ ವಹಿಸಲಾಗಿದೆ. |
| 2 | 21-12-2019 | ನಲ್ಲಗುಟ್ಟಪಲ್ಲಿ ಗ್ರಾಮ ಪಂಚಾಯಿತಿಯ ವೆಂಕಟಾಪುರ ಗ್ರಾಮದ ನೀರು ಸರಬರಾಜು ತಕರಾರು ಸ್ಥಳ ಪರಿಶೀಲಿಸಿ ಬಗೆಹರಿಸಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 3 | 21-12-2019 | ಪುಲಿಗಲ್ ಗ್ರಾಮ ಪಂಚಾಯಿತಿಯ ಬಿ.ಎಫ್.ಟಿ ಬದಲಾವಣೆಗೆ ಕ್ರಮವಹಿಸುವುದು. | ಕ್ರಮ ವಹಿಸಲಾಗಿದೆ. |
| 4 | 21-12-2019 | ತಾಲ್ಲೂಕು ಪಂಚಾಯತ್‌ಗೆ ಬಿಡುಗಡೆಯಾದ ರೂ.5.00 ಲಕ್ಷ ಗಳನ್ನು ವ್ಯಪಗತವಾಗದಂತೆ ಕ್ರಮ ವಹಿಸುವುದು. | ಸಾಮಾನ್ಯ ಸಭೆಯಲ್ಲಿ ಮಂಡಿಸಲಾಗಿದೆ. |
| 5 | 21-12-2019 | ತಾಲ್ಲೂಕು ಪಂಚಾಯತ್‌ನಲ್ಲಿ ಹೊರಗುತ್ತಿಗೆ ಆಧಾರದ ಮೇರೆಗೆ ಕೆಲಸ ನಿರ್ವಹಿಸುತ್ತಿರುವ ಜವಾನರನ್ನು ಮುಂದುವರೆಸುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 6 | 13-05-2020 | ಜೂಲಪಾಳ್ಯ ಗ್ರಾಮ ಪಂಚಾಯಿತಿಯ ಬೋಡಿಕದಿರೆಪಲ್ಲಿ ಗ್ರಾಮದ ನಿವೇಶನ ರಹಿತರಿಗೆ ಹಕ್ಕು ಪತ್ರ ವಿತರಣೆ ಮಾಡಲು ಕ್ರಮ ವಹಿಸುವುದು . | ಕ್ರಮ ವಹಿಸಲಾಗಿದೆ. |
| 7 | 13-05-2020 | ತಿಮ್ಮಂಪಲ್ಲಿ ಗ್ರಾಮ ಪಂಚಾಯಿತಿ ಜಿ.ಮದ್ದೇಪಲ್ಲಿ ಗ್ರಾಮದ ನಿವೇಶನ ರಹಿತರಿಗೆ ಹಕ್ಕು ಪತ್ರ ವಿತರಣೆ ಮಾಡಲು ಕ್ರಮ ವಹಿಸುವುದು . | ಕ್ರಮ ವಹಿಸಲಾಗಿದೆ. |
| 8 | 13-05-2020 | ಬಿಳ್ಳೂರು ಗ್ರಾಮ ಪಂಚಾಯಿತಿ ಬೋಯಿಪಲ್ಲಿ ಗ್ರಾಮದ ನಿವೇಶನ ರಹಿತರಿಗೆ ಹಕ್ಕು ಪತ್ರ ವಿತರಣೆ ಮಾಡಲು ಕ್ರಮ ವಹಿಸುವುದು | ಕ್ರಮ ವಹಿಸಲಾಗಿದೆ. |
| 9 | 13-05-2020 | ಗೂಳೂರು ಗ್ರಾಮ ಪಂಚಾಯಿತಿ ಪಾಪನಕುಂಟೆ ತಾಂಡ ಗ್ರಾಮದ ನಿವೇಶನ ರಹಿತರಿಗೆ ಹಕ್ಕು ಪತ್ರ ವಿತರಣೆ ಮಾಡಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 10 | 13-05-2020 | ತಿಮ್ಮಂಪಲ್ಲಿ ಗ್ರಾಮ ಪಂಚಾಯಿತಿ ತಿಮ್ಮಂಪಲ್ಲಿ ಗ್ರಾಮದ ನಿವೇಶನ ರಹಿತರಿಗೆ ಹಕ್ಕು ಪತ್ರ ವಿತರಣೆ ಮಾಡಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 11 | 13-05-2020 | ಮಿಟ್ಟೇಮರಿ ಗ್ರಾಮ ಪಂಚಾಯಿತಿಯ ಮಿಟ್ಟೇಮರಿ ಗ್ರಾಮದ ನಿವೇಶನ ತಕರಾರಿಗೆ ಸಂಬಂಧಿಸಿದಂತೆ ಸ್ಥಳ ಪರಿಶೀಲಿಸಿ ಬಗೆಹರಿಸಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 12 | 13-05-2020 | ಬಾಗೇಪಲ್ಲಿ ತಾಲ್ಲೂಕಿನ 25 ಗ್ರಾಮ ಪಂಚಾಯಿತಿಗಳ ವಿವಿಧ ಯೋಜನೆಗಳಿಗೆ ಸಂಬಂಧಿಸಿದ ಯೂ.ಸಿ ಮತ್ತು ಬ್ಯಾಂಕ್ ಪಾಸ್ ಶೀಟ್ ಸಲ್ಲಿಸಲು ಸೂಚನೆ. | ಕ್ರಮ ವಹಿಸಲಾಗಿದೆ. |
| 13 | 13-05-2020 | ಗೂಳೂರು ಗ್ರಾಮ ಪಂಚಾಯಿತಿಯ ಟಿ.ಎ.ಇ ಬದಲಾವಣೆಗೆ ಕ್ರಮವಹಿಸುವುದು. | ಕ್ರಮ ವಹಿಸಲಾಗಿದೆ. |
| 14 | 13-05-2020 | ಮ.ನ.ರೇ.ಗಾ ಯೋಜನೆಯ ಸಾಮಗ್ರಿ ಬಿಲ್ಲುಗಳ ಪಾವತಿಗಾಗಿ ಕ್ರಮ ವಹಿಸುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 15 | 13-05-2020 | ಮ.ನ.ರೇ.ಗಾ ಯೋಜನೆಯ ಮಾನವ ದಿನಗಳ ಪ್ರಗತಿಯನ್ನು ಹೆಚ್ಚಿಸುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 16 | 13-05-2020 | ಬಾಗೇಪಲ್ಲಿ ತಾಲ್ಲೂಕು ಮಟ್ಟದಲ್ಲಿ ಇರುವ ಸರ್ಕಾರಿ ಕಾಲೇಜುಗಳಲ್ಲಿ ಮೂಲಭೂತ ಸೌಕರ್ಯಗಳ ಬಗ್ಗೆ ಮಾಹಿತಿ ನೀಡಲು ಸೂಚನೆ. | ಕ್ರಮ ವಹಿಸಲಾಗಿದೆ. |
| 17 | 13-05-2020 | ಪುಲಿಗಲ್ ಗ್ರಾ.ಪಂ ಯ ಸಜ್ಜಲವಾರಿಪಲ್ಲಿ ಗ್ರಾಮದ ಕುಡಿಯುವ ನೀರಿನ ಸಮಸ್ಯೆಗಳ ಬಗ್ಗೆ ಸ್ಥಳ ಪರಿಶೀಲನೆ ಮಾಡುವ ಬಗ್ಗೆ . | ಕ್ರಮ ವಹಿಸಲಾಗಿದೆ. |
| 18 | 13-05-2020 | ತಾಲ್ಲೂಕು ಪಂಚಾಯತ್ ಮಾನ್ಯ ಉಪಾಧ್ಯಕ್ಷರ ಡೀಸಲ್ ಬಿಲ್ಲು ಪಾವತಿ ಮಾಡಲು ಕ್ರಮವಹಿಸುವುದು. | ಕ್ರಮ ವಹಿಸಲಾಗಿದೆ. |
| 19 | 13-05-2020 | ರಾಚ್ಚೇರುವು ಗ್ರಾಮ ಪಂಚಾಯಿತಿಯ ಮುಸಲಿಗಾನಪಲ್ಲಿ ಗ್ರಾಮದಲ್ಲಿನ ನಿವೇಶನ ತಕರಾರಿಗೆ ಸಂಬಂಧಿಸಿದಂತೆ ಸ್ಥಳ ಪರಿಶೀಲಿಸಿ ಬಗೆಹರಿಸಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 20 | 02-09-2020 | ಮಿಟ್ಟೇಮರಿ ಗ್ರಾಮದ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ನರೇಗಾ ಯೋಜನೆಯಡಿಯಲ್ಲಿ ಕಾಮಗಾರಿಯ ಪೂರ್ಣ ಮಾಹಿತಿಯನ್ನು ನೀಡಲು ಸೂಚನೆ . | ಕ್ರಮ ವಹಿಸಲಾಗಿದೆ. |

| ಕ್ರ. ಸಂ | ಕೆ.ಡಿ.ಪಿ ನಡೆದ ದಿನಾಂಕ | ಕೆ.ಡಿ.ಪಿ ಸಭೆಯಲ್ಲಿ ನೀಡಿರುವ ಸೂಚನೆಗಳು | ತೆಗೆದುಕೊಂಡ ಕ್ರಮ |
|---|---|---|---|
| 21 | 02-09-2020 | ಪಿ.ಆರ್.ಇ.ಡಿ ಇಲಾಖೆಯಲ್ಲಿ ನಿರ್ವಹಿಸಿದ ಮ.ನ.ರೇ.ಗಾ ಯೋಜನೆಯಡಿ ಕಾಮಗಾರಿಗಳ ಪರಿಶೀಲನೆ ಮಾಡಲು ಕ್ರಮವಹಿಸುವುದು. | ಕ್ರಮ ವಹಿಸಲಾಗಿದೆ. |
| 22 | 02-09-2020 | ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯ ಖಾಸಗಿ ಕೊಳವೆ ಬಾವಿ ಮತ್ತು ಟ್ಯಾಂಕರ್ ಮೂಲಕ ನೀರು ಸರಬರಾಜಿನ ಬಾಕಿ ಬಿಲ್ಲುಗಳ ಬಗ್ಗೆ ತಹಸೀಲ್ದಾರ್ ಹಾಗೂ ಎ.ಇ.ಇ ಕುಡಿಯುವ ನೀರು ಇಲಾಖೆಯವರೊಂದಿಗೆ ಮಾತನಾಡಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 23 | 02-09-2020 | ಗೂಳೂರು ಗ್ರಾ.ಪಂ ಯ ಎಸ್.ಎಲ್.ಡಬ್ಲ್ಯೂ.ಎಂ ಘಟಕ ನಿರ್ಮಾಣಕ್ಕಾಗಿ ಕ್ರಮವಹಿಸುವುದು | ಕ್ರಮ ವಹಿಸಲಾಗಿದೆ. |
| 24 | 02-09-2020 | ಗ್ರಾ.ಪಂ ವ್ಯಾಪ್ತಿಯಲ್ಲಿನ ಆರ್.ಓ ಪ್ಲಂಟ್ ಮತ್ತು ಕಾಮಗಾರಿಗಳ ಸ್ಥಳಗಳಲ್ಲಿ ನಾಮಫಲಕಗಳನ್ನು ಅಳವಡಿಸಲು ಸೂಚನೆ. | ಕ್ರಮ ವಹಿಸಲಾಗಿದೆ. |
| 25 | 02-09-2020 | ಬಾಗೇಪಲ್ಲಿ ತಾಲ್ಲೂಕಿನ 25 ಗ್ರಾಮ ಪಂಚಾಯಿತಿಗಳಲ್ಲಿನ ನಿವೇಶನ ರಹಿತರ ಪಟ್ಟಿಯನ್ನು ನೀಡಲು ಸೂಚನೆ. | ಕ್ರಮ ವಹಿಸಲಾಗಿದೆ. |
| 26 | 02-09-2020 | 2020-21 ರ ಮೂರ ಕೆ.ಡಿ.ಪಿ ಸಭೆಗಳ ಮಾಹಿತಿಯನ್ನು ನೀಡಲು ಸೂಚನೆ. | ಕ್ರಮ ವಹಿಸಲಾಗಿದೆ. |
| 27 | 02-09-2020 | ದೇವರಾಜ್ ಅರಸು ವಸತಿ ಯೋಜನೆಯಡಿ 14 ವರ್ಗಗಳ ಫಲಾನುಭವಿಗಳನ್ನು ಗುರುತಿಸಲು ಸಂಬಂಧಿಸಿದ ಇಲಾಖಾಧಿಕಾರಿಗಳಿಗೆ ಪತ್ರವನ್ನು ಬರೆದು ಕ್ರಮವಹಿಸುವ ಬಗ್ಗೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 28 | 02-09-2020 | ಕೃಷಿ ಇಲಾಖೆಯಲ್ಲಿ ರೈತರಿಗೆ ನೀಡಿರುವ ಸೌಲಭ್ಯಗಳ ಪಟ್ಟಿಯನ್ನು ನೀಡಲು ಸೂಚಿಸಿದೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 29 | 02-09-2020 | ತೋಟಗಾರಿಕೆ ಇಲಾಖೆಯಲ್ಲಿ ರೈತರಿಗೆ ನೀಡಿರುವ ಸೌಲಭ್ಯಗಳ ಪಟ್ಟಿಯನ್ನು ನೀಡಲು ಸೂಚಿಸಿದೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 30 | 02-09-2020 | ಅಬಕಾರಿ ಇಲಾಖೆಯಿಂದ ಅನಧಿಕೃತ ದಾಸ್ತಾನು ಬಗ್ಗೆ ಎಷ್ಟು ದೂರುಗಳಿಗೆ ಕೇಸ್ ಬುಕ್ ಮಾಡಿರುವ ಬಗ್ಗೆ ಮಾಹಿತಿ ನೀಡಲು ಸೂಚನೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 31 | 02-09-2020 | ಸಮಾಜ ಕಲ್ಯಾಣ ಇಲಾಖೆಯ ನೂತನ ಕಟ್ಟಡ ನಿರ್ಮಾಣ ಮತ್ತು ಉದ್ಘಾಟನೆ ಮಾಡಿರುವ ಮಾಹಿತಿಯನ್ನು ನೀಡಲು ಸೂಚನೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 32 | 02-09-2020 | ಆಹಾರ ಇಲಾಖೆಯಲ್ಲಿ ಹಾಲಿಯವರೆಗೂ ಎಷ್ಟು ಜನ ಫಲಾನುಭವಿಗಳು ಬಿ.ಪಿ.ಎಲ್ ಕಾರ್ಡುಗಳಾಗಿ ಅರ್ಜಿ ಸಲ್ಲಿಸಿರುವ ಮಾಹಿತಿಯ ಬಗ್ಗೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 33 | 02-09-2020 | ಆರ್.ಟಿ.ಓ ಇಲಾಖೆಯಲ್ಲಿ ಸರ್ಕಾರ ನಿಗಧಿಪಡಿಸಿದ ಭಾರಕ್ಕಿಂತ ಹೆಚ್ಚಿನ ಭಾರವನ್ನು ಹೊತ್ತ ವಾಹನಗಳಿಗೆ ಸಂಬಂಧಿಸಿದ ದಾಖಲಿಸಿದ ಪ್ರಕರಣಗಳ ಬಗ್ಗೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 34 | 16-02-2021 | ಪರಗೋಡು ಗ್ರಾ.ಪಂ ಯ ಕಾಶಾಪುರ ಗ್ರಾಮದ ನಿವೇಶನ ಮತ್ತು ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 35 | 16-02-2021 | ಪಿ.ಡಿ.ಓ ಗಳಿಗೆ ಮುಂಬರುವ ಕೆ.ಡಿ.ಪಿ ಸಭೆಗಳಿಗೆ ಭಾಗವಹಿಸಲು ಕ್ರಮ ವಹಿಸುವ ಬಗ್ಗೆ | ಕ್ರಮ ವಹಿಸಲಾಗಿದೆ. |
| 36 | 16-02-2021 | ಪರಗೋಡು ಗ್ರಾ.ಪಂ ಯ ವಡ್ರಪಾಳ್ಯ ಗ್ರಾಮದ ಬಡಾವಣೆಯ ನಿವೇಶನಗಳಿಗೆ ನಿಯಮಾನುಸಾರ ಇ-ಖಾತೆ ಮಾಡಲು ಕ್ರಮ ವಹಿಸುವುದು. | ಕ್ರಮ ವಹಿಸಲಾಗಿದೆ. |
| 37 | 16-02-2021 | ತಹಸೀಲ್ದಾರ್ ರವರಿಗೆ ಗ್ರಾಮ ಪಂಚಾಯ್ತಿಗಳಿಂದ ಬಂದ ನಿವೇಶನ ರಹಿತರ ಫಲಾನುಭವಿಗಳಿಗೆ ಬಡಾವಣೆಗಳಿಗೆ ಅನುಮೋದನೆ ನೀಡಲು ಕ್ರಮವಹಿಸುವ ಬಗ್ಗೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 38 | 16-02-2021 | ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯವರು ಕುಡಿಯುವ ನೀರಿಗೆ ಸಂಬಂಧಿಸಿದಂತೆ ಬೇಸಿಗೆ ಕಾಲದಲ್ಲಿ ಮುನ್ನಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳುವ ಬಗ್ಗೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |
| 39 | 16-02-2021 | ಡಾ\|\|ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ರವರು ಪ.ಜಾತಿ ರವರಿಗೆ ವೈಯಕ್ತಿಕ ಕೊಳವೆ ಬಾವಿಗಳನ್ನು ಕೊರೆಸಲು ಕ್ರಮವಹಿಸುವ ಬಗ್ಗೆ. | ಸಂಬಂಧಪಟ್ಟ ಇಲಾಖೆಗೆ ಕ್ರಮವಹಿಸಲು ಸೂಚಿಸಲಾಗಿದೆ. |

| ಕ್ರ. ಸಂ. | ಕೆ.ಡಿ.ಪಿ ನಡೆದ ದಿನಾಂಕ | ಕೆ.ಡಿ.ಪಿ ಸಭೆಯಲ್ಲಿ ನೀಡಿರುವ ಸೂಚನೆಗಳು | ತೆಗೆದುಕೊಂಡ ಕ್ರಮ |
|---|---|---|---|
| | | **ಗುಡಿಬಂಡೆ ತಾಲ್ಲೂಕು** | |
| 1 | 05-01-2018 | ಜಂಗಾಲಹಳ್ಳಿ ಗ್ರಾಮದಲ್ಲಿ ಮೋಟರ್ ಸುಟ್ಟು ಹೋಗಿರುವ ಕಾರಣದಿಂದ ಸಾರ್ವಜನಿಕರಿಗೆ ನೀರಿನ ಸಮಸ್ಯೆ ಆಗಿರುತ್ತದೆ. | ಕ್ರಮ ವಹಿಸಲಾಗಿದೆ. |
| 2 | 05-01-2018 | ನ್ಯಾಯಬೆಲೆ ಅಂಗಡಿಗಳಲ್ಲಿ ಅಕ್ಕಿ ಮತ್ತು ಇತರೆ ಆಹಾರ ಧಾನ್ಯಗಳು ನೀಡದೇ ಇರುವ ಕಾರಣದ ಬಗ್ಗೆ | ಕ್ರಮ ವಹಿಸಲಾಗಿದೆ. |
| 3 | 20-06-2018 | ಅಂಗನವಾಡಿ ಕಾರ್ಯಕರ್ತರು ಅಂಗನವಾಡಿ ಕೇಂದ್ರದಲ್ಲಿ ತೂಕದ ತಕ್ಕಡಿ ಇಟ್ಟುಕೊಂಡು ಆಹಾರ ಧಾನ್ಯವನ್ನು ಸರಿಯಾಗಿ ಮಕ್ಕಳಿಗೆ ತೂಕ ಹಾಕಿಸಿಕೊಡುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 4 | 20-06-2018 | ಚೆಕ್ ಡ್ಯಾಂ ಕಾಮಗಾರಿಗಳನ್ನು ಸರಿಯಾದ ರೀತಿಯಲ್ಲಿ ಆಗಿರುವುದಿಲ್ಲವೆಂದು ಶಾಸಕರು ಚರ್ಚಿಸಲಾಗಿ ಇದರ ಬಗ್ಗೆ ಕ್ರಮ ಕೈಕೊಳುವ ಬಗ್ಗೆ . | ಕ್ರಮ ವಹಿಸಲಾಗಿದೆ. |
| 5 | 20-06-2018 | ಅಡಿಗೆ ಸಹಾಯಕರಿಗೆ ಎಷ್ಟು ತಿಂಗಳಿಂದ ನೀಡಬೇಕೆಂದು ಅಕ್ಷರದಾಸೋಹ ರವರಿಂದ ಮಾಹಿತಿ ನೀಡಲು ಸೂಚಿಸಿದರು. | ಕ್ರಮ ವಹಿಸಲಾಗಿದೆ. |
| 6 | 20-06-2018 | ಈ ತಿಂಗಳಲ್ಲಿ 297 ಪಡಿತರ ಚೀಟಿಗಳನ್ನು ತ್ವರಿತವಾಗಿ ನೀಡಲು ಸೂಚಿಸಿದರು. | ಕ್ರಮ ವಹಿಸಲಾಗಿದೆ. |
| 7 | 20-06-2018 | ಆಸ್ಪತ್ರೆಯಲ್ಲಿ ಎಕ್ಸ್ ರೇ ತೆಗೆಯಲು ಸಿಬ್ಬಂದಿಯವರು ಯಾರೂ ಇರುವುದಿಲ್ಲವೆಂದು ಆರೋಗಾಧಿಕಾರಿಗಳಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 8 | 14-11-2018 | ಸೋಮೇನಹಳ್ಳಿ ಗ್ರಾಮದಲ್ಲಿ ಓವರ್ ಟ್ಯಾಂಕ್ ನಿರ್ಮಿಸಲು ಗ್ರಾಮ ಪಂಚಾಯಿತಿ ಪಿ.ಡಿ.ಓ ರವರಿಗೆ ಜಾಗದ ಬಗ್ಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 9 | 14-11-2018 | ಸೋಮಲಾಪುರ ಗ್ರಾಮದಲ್ಲಿ ಡಾ\|\| ಬಿ.ಆರ್ ಅಂಬೇಡ್ಕರ್ ಭವನ ನಿರ್ಮಿಸಲು ಸಭೆಯಲ್ಲಿ ಚರ್ಚಿಸಿ ಸಮಾಜ ಕಲ್ಯಾಣ ಅಧಿಕಾರಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 10 | 14-11-2018 | ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ 1 ರಿಂದ 5ನೇ ತರಗತಿಗಿಂತ ಕಡಿಮೆ ಇರುವ ಮಕ್ಕಳ ಮಾಹಿತಿಯ ಬಗ್ಗೆ. | ಕ್ರಮ ವಹಿಸಲಾಗಿದೆ. |
| 11 | 14-11-2018 | ಶಿಶು ಅಭಿವೃದ್ಧಿ ಅಧಿಕಾರಿಯವರು ತಾಲೂಕಿನ ಅಂಗನವಾಡಿ ಕೇಂದ್ರಗಳಿಗೆ ಭೇಟಿ ನೀಡಿ ಆಹಾರ ಪದಾರ್ಥಗಳು ಸರಿಯಾಗಿ ಬಂದಿದಿಯೋ ಇಲ್ಲವೇ ಎಂದು ಪರಿಶೀಲಿಸಿ ವರದಿ ನೀಡುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 12 | 14-11-2018 | ಗುಡಿಬಂಡೆ ತಾಲ್ಲೂಕಿನಲ್ಲಿ ಕಾಲು ಬಾಯಿ ಜ್ವರ ಜಾಸ್ತಿಯಾಗಿದ್ದು ಇದನ್ನು ನಿಯಂತ್ರಿಸಲು ಪಶು ವೈದ್ಯಾಧಿಕಾರಿಗಳಿಗೆ ಸೂಚಿಸಿರುವ ಬಗ್ಗೆ | ಕ್ರಮ ವಹಿಸಲಾಗಿದೆ. |
| 13 | 14-11-2018 | ಗುಡಿಬಂಡೆ ತಾಲ್ಲೂಕಿನ ಹೊಸ ಘಟಕಗಳಿಗೆ ಬೋರ್ ವೆಲ್ ಹಾಕಿಸಿರುವ ಘಟಕಗಳಿಗೆ ವಿದ್ಯುತ್ ಪೂರೈಸಲು ಬೆಸ್ಕಾಂ ಅಧಿಕಾರಿಗಳಿಗೆ ಸೂಚಿಸಿರುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 14 | 14-11-2018 | ಗುಡಿಬಂಡೆ ತಾಲಲ್ಲೂಕಿನ ಬೀಚಗಾನಹಳ್ಳಿ ಗ್ರಾಮದ ಬಳಿ ಅರಣ್ಯದಲ್ಲಿ ಮರ ಗಿಡಗಳು ಕಟಾಯಿಸುತ್ತಾರೆಂದು ದೂರು ಬಂದಿದ್ದು ಇದನ್ನು ಕ್ರಮ ಕೈಗೊಳುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 15 | 14-11-2018 | ಕೊಂಡರೆಡ್ಡಿಹಳ್ಳಿ ಗ್ರಾಮದಲ್ಲಿ ನಿವೇಶನಗಳಲ್ಲಿ ಹಕ್ಕು ಪತ್ರ ವಿತರಣೆ ಮಾಡುವ ಬಗ್ಗೆ ಚರ್ಚಿಸಿ ಸದರಿ ನಿವೇಶನಗಳಿಗೆ ಆದ್ದು ಬಸ್ತು ಮಾಡಲು ತಹಸೀಲ್ದಾರ್ ರವರಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 16 | 17-06-2019 | ಬರ ಪರಿಹಾರ ಯೋಜನೆಯಡಿಯಲ್ಲಿ ದಪ್ಪರ್ತಿ ಗ್ರಾಮದ 08 ಜನ ರೈತರಿಗೆ ಕೃಷಿ ಹೊಂಡ ಮಂಜೂರಾಗಿದ್ದು ಸದರಿ ಕೆಲಸವು ಮುಕ್ತಾಯವಾಗಿ ಬಿಲ್ ಪಾವತಿಯಾಗಿರುವುದಿಲ್ಲ ಇದರ ಬಗ್ಗೆ ಕೃಷಿ ಅಧಿಕಾರಿಗಳಿಗೆ ಸೂಚಿಸಿ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 17 | 17-06-2019 | ಬರ ಪರಿಹಾರ ಯೋಜನೆಯಡಿಯಲ್ಲಿ ಗುಡಿಬಂಡೆ ತಾಲ್ಲೂಕಿನ ಸೋಮೇನಹಳ್ಳಿ ಗ್ರಾಮದಲ್ಲಿ ಮೇವು ವಿತರಣೆ ಮಾಡಲಾಗಿರುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 18 | 17-06-2019 | ನಿಚ್ಚನಬಂಡನಹಳ್ಳಿ ಗ್ರಾಮದಲ್ಲಿ ವಾಲ್ಮೀಕಿ ಕಟ್ಟಡ ಕಟ್ಟಲು ನಿವೇಶನ ತೊಂದರೆ ಇರುವುದಾಗಿ ಸಭೆಯಲ್ಲಿ ತಿಳಿಸಿರುವ ಬಗ್ಗೆ | ಕ್ರಮ ವಹಿಸಲಾಗಿದೆ. |
| 19 | 23-12-2019 | ರೈತರು ಬೆಳೆದಿರುವ ತೊಗರಿ ರಾಗಿ ಜೋಳ, ಮತ್ತು ಇತರೆ ಧಾನ್ಯಗಳಿಗೆ ಮಾರುಕಟ್ಟೆಗಳಲ್ಲಿ ಹಣ ನಿಗಧಿಪಡಿಸಿರುವ ಬಗ್ಗೆ ಆಹ್ವಾನ ಪತ್ರಿಕೆಗಳನ್ನು ಪ್ರತಿ ಯೊಂದು ಹಳ್ಳಿಗಳಿಗೆ ತಿಳಿಸಲು ಸೂಚಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 20 | 23-12-2019 | ಕುಡಿಯುವ ನೀರಿನ ಘಟಕಗಳು ಹಾಗೂ ಕೊಳವೆ ಬಾವಿಗಳ ಬಗ್ಗೆ ಚರ್ಚಿಸಲಾಗಿ ಸ್ಟೀಲ್ ಕಂಬಗಳು ಇರುವ ಘಟಕಗಳಲ್ಲಿ ತೆಗೆದು ಹಾಕಿ ಸೀಮೆಂಟ್ ಕಂಬಗಳನ್ನು ಹಾಕಲು ಸಹಾಯಕ ಕಾರ್ಯಪಾಲಕ ಅಭಿಯಂತರರಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 21 | 23-12-2019 | ತಾಲ್ಲೂಕು ಪಂಚಾಯಿತಿ ಉಪಾಧ್ಯಕ್ಷರು ಬೈರಾರೆಡ್ಡಿ ಜಿ.ಪಿ ಮಾತನಾಡಿ ಚಿನ್ನೇನಹಳ್ಳಿ ಕುಡಿಯುವ ನೀರಿನ ಘಟಕಕ್ಕೆ ವಿದ್ಯುತ್ ಸರಬರಾಜು ಮಾಡಿರುವುದಿಲ್ಲವೆಂದು ಸಹಾಯಕ ಕಾರ್ಯಪಾಲಕ ಅಭಿಯಂತರರಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |

| ಕ್ರ. ಸಂ | ಕೆ.ಡಿ.ಪಿ ನಡೆದ ದಿನಾಂಕ | ಕೆ.ಡಿ.ಪಿ ಸಭೆಯಲ್ಲಿ ನೀಡಿರುವ ಸೂಚನೆಗಳು | ತೆಗೆದುಕೊಂಡ ಕ್ರಮ |
|---|---|---|---|
| 22 | 23-12-2019 | ಉಲ್ಲೋಡು, ತಿರುಮಣಿ, ಚಂಡೂರು ಎ.ಎನ್.ಎಂ ಕ್ವಾಟ್ರಸ್‌ನಲ್ಲಿ ಸಿಬ್ಬಂದಿ ಇರುವುದಿಲ್ಲವೆಂದು ಸಾರ್ವಜನಿಕರಿಂದ ದೂರು ಬಂದಿರುವುದಾಗಿ ಸಭೆಯಲ್ಲಿ ಚರ್ಚಿಸುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 23 | 23-12-2019 | ಗೆಗ್ಗಲರಾಲ್ಲಹಳ್ಳಿ ಗ್ರಾಮದಲ್ಲಿ ನಿವೇಶನಗಳು ಬಗ್ಗೆ ಚರ್ಚಿಸಲಾಗಿ ನಿವೇಶನಗಳನ್ನು ಸರ್ವೆ ಮಾಡಲು ತಾಲ್ಲೂಕು ಭೂಮಾಪಕರಾದ ನಂದಾರೆಡ್ಡಿ ರವರಿಗೆ ವಹಿಸಲಾಗಿರುತ್ತದೆ. | ಕ್ರಮ ವಹಿಸಲಾಗಿದೆ. |
| 24 | 23-12-2019 | ಗುಡಿಬಂಡೆ ತಾಲ್ಲೂಕು ವ್ಯಾಪ್ತಿಗೆ ಬರುವ ವಿದ್ಯಾರ್ಥಿ ನಿಲಯಗಳಲಿ ಬಯೋಮೆಟ್ರಿಕ್ ಬಳಸಲು ಹಾಜರಾತಿ ಮಾಹಿತಿಯನ್ನು ವಿಸ್ತರಣಾಧಿಕಾರಿಗಳಿಗೆ ತಿಳಿಸಿರುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 25 | 23-12-2019 | ಗುಡಿಬಂಡೆ ಕೆರೆ ಕಟ್ಟೆ ಮೇಲೆ ದುರಸ್ಥಿ ಕಾಮಗಾರಿ ಮತ್ತು ಪಟ್ಟಣ ಪಂಚಾಯಿತಿ ಹತ್ತಿರ ಮೋರಿ ದುರಸ್ಥಿ ಕಾಮಗಾರಿ ಮಾಡಲು ಚರ್ಚಿಸಲಾಗಿ ಲೋಕೋಪಯೋಗಿ ಇಲಾಖೆಯವರಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 26 | 14-09-2020 | ಗುಡಿಬಂಡೆ ತಾಲ್ಲೂಕಿನ ಸಾರ್ವಜನಿಕರ ರೈತರಿಗೆ ಸಾಗುವಳಿ ಚೀಟಿಗಳು ನೀಡದೇ ಇರುವ ದೂರುಗಳಿದ್ದು, ಇದರ ಬಗ್ಗೆ ತಹಸೀಲ್ದಾರ್ ರವರಿಗೆ ತಿಳಿಸಿರುವ ಬಗ್ಗೆ . | ಕ್ರಮ ವಹಿಸಲಾಗಿದೆ. |
| 27 | 14-09-2020 | ಸರ್ಕಾರಿ ಜಮೀನಿನಲ್ಲಿ ರೈತರು ಮನೆ ಕಟ್ಟಿಕೊಂಡಿರುವ ರವರಿಗೆ ಅಕ್ರಮ ಸಕ್ರಮ ಮಾಡಿಕೊಡಲು ತಹಸೀಲ್ದಾರ್ ರವರಿಗೆ ತಿಳಿಸಿರುವ ಬಗ್ಗೆ . | ಕ್ರಮ ವಹಿಸಲಾಗಿದೆ. |
| 28 | 14-09-2020 | ಗುಡಿಬಂಡೆ ತಾಲ್ಲೂಕಿನ ರೈತರಿಗೆ ಪಿ.ಎಂ ಕಿಸಾನ್ ಯೋಜನೆಯಡಿಯಲ್ಲಿ ರೈತರಿಗೆ ಸರಿಯಾದ ಮಾಹಿತಿ ನೀಡದೇ ರೈತರಿಗೆ ಅನ್ಯಾಯವಾಗಿರುತ್ತದೆ. ಇದರ ಬಗ್ಗೆ ಮುಂದಿನ ಸಭೆಯಲ್ಲಿ ನೀಡಲು ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 29 | 14-09-2020 | ಗುಡಿಬಂಡೆ ತಾಲ್ಲೂಕಿನ ಸರ್ಕಾರಿ ಆಸ್ಪತ್ರೆಯಲ್ಲಿ ಕೋವಿಡ್ -19 ಬಗ್ಗೆ ರೋಗಿಗಳು ಆಸ್ಪತ್ರೆಗೆ 10 ಗಂಟೆಗೆ ಬಂದಿದ್ದು, ಆದರೆ 5.00 ಗಂಟೆಯವರೆಗೂ ವೈದ್ಯರಾಗಲಿ , ಸಿಬ್ಬಂದಿಯವರಾಗಲಿ ರೋಗಿಗಳನ್ನು ವಿಚಾರಿಸದೇ ಆಳೆದಾಡಿಸಿರುವ ಬಗ್ಗೆ. | ಕ್ರಮ ವಹಿಸಲಾಗಿದೆ. |
| 30 | 14-09-2020 | ಗುಡಿಬಂಡೆ ತಾಲ್ಲೂಕಿನ ಅಮಾನಿ ಬೈರಸಾಗರ ಪಕ್ಕದಲ್ಲಿ ರೈತರು ಮೋಟರ್‌ಗಳನ್ನು ಹಾಕಿಕೊಂಡು ನೀರನ್ನು ಹೊಡೆದುಕೊಳ್ಳುತ್ತಿರುವ ಬಗ್ಗೆ ದೂರುಗಳು ಬಂದಿರುತ್ತವೆ ಇದರ ಬಗ್ಗೆ ತನಿಖೆ ಮಾಡಲು ಸಣ್ಣ ನೀರಾವರಿ ಅಧಿಕಾರಿಗಳಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 31 | 14-09-2020 | ಗುಡಿಬಂಡೆ ತಾಲ್ಲೂಕಿನ ಮುಖ್ಯ ರಸ್ತೆಗಳಲ್ಲಿ ಸಿ.ಸಿ ಕ್ಯಾಮರಾಗಳು ಹಾಕಲು ಸಭೆಯಲ್ಲಿ ಸರ್ಕಲ್ ಇನ್ಸ್‌ಪೆಕ್ಟರ್ ರವರಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |
| 32 | 14-09-2020 | ಗುಡಿಬಂಡೆ ತಾಲ್ಲೂಕಿನ ವಿನಾಯಕ ನಗರದಲ್ಲಿ ಟ್ರಾನ್ಸ್ ಫರ್ಮ್ ಹಾಕಲು ಚರ್ಚಿಸಿ ಸಹಾಯಕ ಕಾರ್ಯಪಾಲಕ ಅಭಿಯಂತರ ರವರಿಗೆ ತಿಳಿಸಿರುತ್ತಾರೆ. | ಕ್ರಮ ವಹಿಸಲಾಗಿದೆ. |

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **3359** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ವಸತಿ ಇಲಾಖೆಯ ವತಿಯಿಂದ ಯಾವ ಯಾವ ಯೋಜನೆಗಳಡಿ ಮನೆಗಳನ್ನು ಮಂಜೂರು ಮಾಡಲಾಗುತ್ತಿದೆ ; | ರಾಜ್ಯದಲ್ಲಿ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಎಲ್ಲಾ ಬಡತನ ರೇಖೆಗಿಂತ ಕೆಳಗಿರುವ ವಸತಿ ರಹಿತ ಕುಟುಂಬಗಳಿಗೆ ವಸತಿ ಸೌಕರ್ಯವನ್ನು ಒದಗಿಸಲು ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಗ್ರಾಮೀಣ ಪ್ರದೇಶದಲ್ಲಿ ವಸತಿ ರಹಿತ ಫಲಾನುಭವಿಗಳಿಗೆ ಕೆಳಕಂಡ ವಸತಿ ಯೋಜನೆಗಳು :<br>1. ಬಸವ ವಸತಿ ಯೋಜನೆ<br>2. ಡಾ\|\| ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ<br>3. ಪ್ರಧಾನ ಮಂತ್ರಿ ಅವಾಸ್ ಯೋಜನೆ<br>4. ದೇವರಾಜ ಅರಸು ವಸತಿ ಯೋಜನೆ<br><br>ನಗರ ಪ್ರದೇಶದಲ್ಲಿ ವಸತಿ ರಹಿತ ಫಲಾನುಭವಿಗಳಿಗೆ ಕೆಳಕಂಡ ವಸತಿ ಯೋಜನೆಗಳು :<br>1. ಡಾ\|\| ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ<br>2. ಪ್ರಧಾನ ಮಂತ್ರಿ ಅವಾಸ್ ಯೋಜನೆ<br>3. ದೇವರಾಜ ಅರಸು ವಸತಿ ಯೋಜನೆ<br>4. ವಾಜಪೇಯಿ ನಗರ ವಸತಿ ಯೋಜನೆ<br>5. ಮಾನ್ಯ ಮುಖ್ಯಮಂತ್ರಿಗಳ 1 ಲಕ್ಷ ಮನೆ ಯೋಜನೆ (ಬೆಂಗಳೂರು) |
| (ಆ) | ಈ ಇಲಾಖೆಯ ವಿವಿಧ ಯೋಜನೆಗಳಡಿ ಫಲಾನುಭವಿಗಳನ್ನು ಆಯ್ಕೆ ಮಾಡಲು ಇರುವ ಮಾನದಂಡಗಳೇನು ; | ವಿವಿಧ ಗ್ರಾಮೀಣ ಯೋಜನೆಗಳಡಿ ಹಂಚಿಕೆ ಮಾಡುವ ಮನೆಗಳನ್ನು ಪಡೆಯಲು ನಿಗಧಿಪಡಿಸಿರುವ ಮಾನದಂಡಗಳು ಮತ್ತು ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) ಯಡಿ ಫಲಾನುಭವಿಗಳನ್ನು ಗುರುತಿಸಲು/ಆಯ್ಕೆ ಮಾಡುವ ಮಾನದಂಡಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| (ಇ) | ಪ್ರಸಕ್ತ ಸಾಲಿನಲ್ಲಿ ಇಲಾಖೆಯ ವತಿಯಿಂದ ಯಾವ ಯಾವ ಯೋಜನೆಗಳಡಿ ಎಷ್ಟೆಷ್ಟು ಮನೆಗಳನ್ನು ಮಂಜೂರು ಮಾಡಲಾಗಿದೆ ; | 2020-21 ನೇ ಸಾಲಿನಲ್ಲಿ ದೇವರಾಜ್ ಅರಸು ವಸತಿ ಯೋಜನೆ(ಗ್ರಾಮೀಣ)ಯಡಿ 4238 ಮನೆಗಳನ್ನು ಮಂಜೂರು ಮಾಡಿ ಕಾಮಗಾರಿ ಆದೇಶವನ್ನು ನೀಡಲಾಗಿದೆ.<br><br>2020-21 ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಪ್ರಧಾನ ಮಂತ್ರಿ ಅವಾಸ್ ಯೋಜನೆ(ಗ್ರಾಮೀಣ)ರಡಿ 151715 ಮನೆಗಳ ಗುರಿಯನ್ನು ರಾಜ್ಯಕ್ಕೆ ನೀಡಿದ್ದು, ಪ್ರತಿ ಗ್ರಾಮ ಪಂಚಾಯಿತಿಗೆ 20 ಮನೆಗಳಂತೆ ಹಂಚಿಕೆ ಮಾಡಲಾಗಿರುತ್ತದೆ. ಫಲಾನುಭವಿಗಳ ಆಯ್ಕೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |

| (ಈ) | ಈ ಯೋಜನೆಗಳಿಗೆ ಪ್ರಸಕ್ತ ಸಾಲಿನಲ್ಲಿ ಒದಗಿಸಲಾಗಿರುವ ಅನುದಾನವೆಷ್ಟು ಹಾಗೂ ಬಿಡುಗಡೆ ಮಾಡಲಾದ ಅನುದಾನವೆಷ್ಟು ? (ಯೋಜನೆವಾರು ಮಾಹಿತಿ ಒದಗಿಸುವುದು) | 2020-21 ನೇ ಸಾಲಿನ ಆಯವ್ಯಯದಲ್ಲಿ ರೂ.3,344.00 ಕೋಟಿಗಳನ್ನು ಒದಗಿಸಲಾಗಿದ್ದು, ಈವರೆಗೆ ರೂ.2,594.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಯೋಜನೆವಾರು ವಿವರ ಕೆಳಕಂಡಂತಿದೆ. |
|---|---|---|

(ರೂ.ಕೋಟಿಗಳಲ್ಲಿ)

| ಯೋಜನೆಗಳು | ಒದಗಿಸಲಾದ ಅನುದಾನ | ಬಿಡುಗಡೆಯಾದ ಅನುದಾನ |
|---|---|---|
| ಬಸವ ವಸತಿ ಯೋಜನೆ | 792.00 | 792.00 |
| ಡಾ.ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ | 1148.00 | 1148.00 |
| ಡಿ.ದೇವರಾಜು ಅರಸು ವಸತಿ ಯೋಜನೆ | 37.00 | 37.00 |
| ವಾಜಪೇಯಿ ನಗರ ವಸತಿ ಯೋಜನೆ | 352.00 | 352.00 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 515.00 | 265.00 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 500.00 | 0.00 |
| **ಒಟ್ಟು** | **3344.00** | **2594.00** |

ಮೇಲ್ಕಂಡ ಅನುದಾನದಲ್ಲಿ ಸಮಾಜ ಕಲ್ಯಾಣ ಇಲಾಖೆ ರೂ.200.00 ಕೋಟಿಗಳು ಹಾಗೂ ಹಣಕಾಸು ಸಂಸ್ಥೆಯಿಂದ ಪಡೆದ ಸಾಲ ರೂ.600.00 ಕೋಟಿಗಳು ಸೇರಿರುತ್ತವೆ.

ಸದರಿ ಬಿಡುಗಡೆಯಾದ ಅನುದಾನದಲ್ಲಿ ಬಸವ ವಸತಿ ಯೋಜನೆ ರೂ.300 ಕೋಟಿಗಳು, ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ ರೂ.187.50 ಕೋಟಿಗಳು, ಡಿ.ದೇವರಾಜು ಅರಸು ವಸತಿ ಯೋಜನೆ ರೂ.14.50 ಕೋಟಿಗಳು, ವಾಜಪೇಯಿ ನಗರ ವಸತಿ ಯೋಜನೆ ರೂ.37.50 ಕೋಟಿಗಳು ಹಾಗೂ ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) ರೂ.251.62 ಕೋಟಿಗಳು ಒಟ್ಟಾರೆ ರೂ.791.12 ಕೋಟಿಗಳ ಅನುದಾನ ಬಿಡುಗಡೆಗೆ ಖಜಾನೆಯಲ್ಲಿ ಬಿಲ್‌ಗಳು ಸಲ್ಲಿಸಿದ್ದು, ಖಜಾನೆಯಲ್ಲಿ ಪಾವತಿಸುವ ಕ್ರಮ ಪ್ರಕ್ರಿಯೆಯಲ್ಲಿರುತ್ತದೆ.

ಸಂಖ್ಯೆ :ವಇ 157 ಹೆಚ್‌ಎಎಂ 2021

**(ವಿ. ಸೋಮಣ್ಣ)**
ವಸತಿ ಸಚಿವರು

ಅನುಬಂಧ

ವಿವಿಧ ಗ್ರಾಮೀಣ ಯೋಜನೆಗಳಡಿ ಹಂಚಿಕೆ ಮಾಡುವ ಮನೆಗಳನ್ನು ಪಡೆಯಲು ನಿಗಧಿಪಡಿಸಿರುವ ಮಾನದಂಡಗಳು ಈ ಕೆಳಕಂಡತಿವೆ.

- ಅರ್ಜಿದಾರರು ಕಡ್ಡಾಯವಾಗಿ ಮಹಿಳೆಯಾಗಿರಬೇಕು (ವಿವಾಹಿತ ಅಥವಾ ಏಕ ಮಹಿಳಾ ಒಡೆತನದ ಗೃಹಿಣಿ ). ಮಾಜಿ ಯೋಧರು, ವಿಧುರರು, ಅಂಗವಿಕಲರು ಮತ್ತು ಹಿರಿಯ ನಾಗರೀಕರಾಗಿದ್ದಲ್ಲಿ ಪುರುಷರು ಸಹಾ ಅರ್ಹರಾಗಿರುತ್ತಾರೆ.
- ಅರ್ಜಿದಾರರ ಕುಂಟುಂಬವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಗ್ರಾಮೀಣ ಪ್ರದೇಶದವರಾಗಿದ್ದಲ್ಲಿ ರೂ.32,000/- ಕ್ಕಿಂತ ಕಡಿಮೆ ಇರಬೇಕು ನಗರ ಪ್ರದೇಶದಲ್ಲಿ ರೂ.87,600/-ರ ಒಳಗಿರಬೇಕು.
- ಅರ್ಜಿದಾರರ ಕುಟುಂಬವು ವಸತಿ ರಹಿತರಾಗಿದ್ದು, ಅರ್ಜಿದಾರರು ಅಥವಾ ಕುಟುಂಬದ ಯಾವುದೇ ಸದ್ಯಸರ ಹೆಸರಿನಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಸ್ವಂತ ಮನೆಯನ್ನು ಹೊಂದಿರಬಾರದು. ಶಿಥಿಲಗೊಂಡ ಮನೆ ಅಥವಾ ಗುಡಿಸಲಿನಲ್ಲಿ ವಾಸಿಸುತ್ತಿರುವವರು ಅರ್ಹರಾಗಿರುತ್ತಾರೆ.
- ಅರ್ಜಿದಾರರು ಸ್ವಂತ ನಿವೇಶನ ಹೊಂದಿದ್ದು ನಿವೇಶನಕ್ಕೆ ಸಂಬಂಧಿಸಿದಂತೆ ಖಾತೆ ಹೊಂದಿರಬೇಕು (ಪಾರಂಪರಿಕ ಅರಣ್ಯ ಹಕ್ಕುಗಳ ಕಾಯ್ದೆಯನ್ವಯ ಜಿಲ್ಲಾ ಸಮಿತಿಯಿಂದ ನೀಡಲಾದ ಹಕ್ಕುಪತ್ರ ಪಡೆದಿದ್ದಲ್ಲಿ ವಸತಿ ಸೌಕರ್ಯ ಪಡೆಯಲು ಪರಿಗಣಿಸಬಹುದಾಗಿದೆ.)
- ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.
- ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾ)ಯಡಿ ವಸತಿ ಸೌಲಭ್ಯ ಪಡೆಯಲು ಕೇಂದ್ರ ಸರ್ಕಾರದಿಂದ ನೀಡಲಾದ ಸಾಮಾಜಿಕ ಆರ್ಥಿಕ ಮತ್ತು ಜಾತಿ ಜನಗಣತಿ 2011ರ ಪಟ್ಟಿಯಲ್ಲಿ ಹೆಸರು ಸೇರಿರಬೇಕು.
- ಡಾ||ಬಿ.ಆರ್.ಅಂಬೇಡ್ಕರ್ ಆವಾಸ್ ಯೋಜನೆಯಡಿ ವಸತಿ ಸೌಲಭ್ಯ ಪಡೆಯಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟವರ್ಗಕ್ಕೆ ಸೇರಿದವರಾಗಿರಬೇಕು. ಈ ವರ್ಗದ ವಸತಿ ರಹಿತರಿಗೆ ಬೇಡಿಕೆ ಆಧಾರಿತವಾಗಿ ವಸತಿ ಕಲ್ಪಿಸಲಾಗುವುದು.

**ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿ ಫಲಾನುಭವಿಗಳನ್ನು ಗುರುತಿಸಲು/ ಆಯ್ಕೆ ಮಾಡುವ ಮಾನದಂಡ ಈ ಕೆಳಗಿನಂತಿವೆ.**

- ಫಲಾನುಭವಿಯು ಬೇಡಿಕೆ ಸಮೀಕ್ಷೆಯಲ್ಲಿರಬೇಕು.
- ದೇಶದಾದ್ಯಂತ ಅವನ / ಅವಳ ಹೆಸರಿನಲ್ಲಿ ಯಾವುದೇ ಮನೆ ಇರಬಾರದು.
- ಕೇಂದ್ರ ಸರ್ಕಾರದ ಸಹಾಯಧನ ರೂ.1.50 ಲಕ್ಷ ಪಡೆಯಲು ವಾರ್ಷಿಕ ಆದಾಯ ರೂ.3.00 ಲಕ್ಷಕ್ಕಿಂತ ಕಡಿಮೆ ಇರಬೇಕು. ರಾಜ್ಯ ಸರ್ಕಾರದ ಸಹಾಯಧನ ಪಡೆಯಲು ವಾರ್ಷಿಕ ಆದಾಯ ರೂ. 87600/- ರ ಒಳಗಿರಬೇಕು.
- ಇತರೇ ವಸತಿ ಯೋಜನೆಗಳಲ್ಲಿ ಈಗಾಗಲೇ ಸಹಾಯಧನ ಪಡೆದಿರಬಾರದು.

ಫಲಾನುಭವಿಯು ಸ್ವಂತ ನಿವೇಶನ ಹೊಂದಿರಬೇಕು.

